# ತಿರುಮಲೆಯಲ್ಲಿನ ಸೌಕರ್ಯಗಳು




## ಕಾಲುಹಾದಿಯಲ್ಲಿ ಬೆಟ್ಟವನ್ನೇರುವವರಿಗೆ ಇರುವ ಸೌಕರ್ಯಗಳು :

ಅಸಂಖ್ಯಾತ ಯಾತ್ರಿಕರು ತಮ್ಮ ಹರಕೆಯ ಭಾಗವಾಗಿ ತಿರುಮಲೆಯನ್ನು ಕಾಲುಹಾದಿಯ ಮೂಲಕ ಏರಿ ತಲುಪುತ್ತಾರೆ ಅವರ ಅನುಕೂಲಕ್ಕಾಗಿ ತಿ ತಿ ದೇ ಗಳು ಹಲವು ಸೌಕರ್ಯಗಳನ್ನು ಒದಗಿಸಿವೆ

* ಬೆಟ್ಟವನ್ನು ಹತ್ತುವ ಯಾತ್ರಿಕರಿಗಾಗಿ ತಿರುಪತಿಯ ರೈಲ್ವೆ ನಿಲ್ದಾಣದಿಂದ ಕೇಂದ್ರ ಬಸ್‌ನಿಲ್ದಾಣ ಕಪಿಲತೀರ್ಥಗಳ ಮೂಲಕ ಹಾದು ಅಲಿಪಿರಿಯನ್ನು ತಲುಪುವಂತೆ ಎರಡು ಬಸ್‌ಗಳನ್ನು ಉಚಿತವಾಗಿ ಓಡಿಸಲಾಗುತ್ತಿದೆ ಈ ಉಚಿತ ಪ್ರಯಾಣದ ಬಸ್‌ಗಳು ಬೆಳಗ್ಗೆ 4-00 ಗಂಟೆಯಿಂದ ರಾತ್ರಿ 11-00 ಗಂಟೆಯವರೆಗೆ ಅರವತ್ನಾಲ್ಕು ಬಾರಿ ನಡೆಯುತ್ತವೆ
* ತಿರುಪತಿಯ ಸತ್ರಗಳಿಂದ / ಅಲಿಪಿರಿಯಿಂದ ತಿರುಮಲೆಗೆ ಯಾತ್ರಿಕರ ಸಾಮಾನುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು
* ಗಾಳಿಗೋಪುರ, ಚಿಟ್ಟಿಬೆಕ್ಕುಡು, ಮಾಮಂಡೂರು ಮೆಟ್ಟು ನರಸಿಂಹಸ್ವಾಮಿ ಗುಡಿ, ಮೊಣಕಾಲು ಮುರಿ ಮೊದಲಾದೆಡೆಗಳಲ್ಲಿ ಅಡಿಗೆ ಮಾಡಿಕೊಳ್ಳುವ ಏರ್ಪಾಡು
* ಕಾಲುಹಾದಿಯುದ್ದಕ್ಕೂ ಕುಡಿಯುವ ನೀರಿನ ಸೌಲಭ್ಯವಿದೆ
* ಕಾಲುಹಾದಿಯಲ್ಲಿ ಶೌಚಾಲಯಗಳೂ ಉಂಟು
* ಮುಖ್ಯವಾದ ಆಯಕಟ್ಟಿನ ಸ್ಥಳಗಳಲ್ಲಿ ವಿಶ್ರಾಂತಿ ಪಡೆಯಲು ನೆರಳಿನ ವ್ಯವಸ್ಥೆ
* ವಂಚಕರು, ಮೋಸಗಾರರ ಪಾಲಿಗೆ ಸಿಕ್ಕಿ ಯಾತ್ರಿಕರು ವಂಚಿತರಾಗದಂತೆ ನೋಡಿಕೊಳ್ಳಲು ಹಗಲು ರಾತ್ರಿ ಸಂರಕ್ಷಕ ಭಟರ, ಗೂರ್ಖಾಗಳ, ಪೋಲೀಸರ ಕಾವಲು ಪಹರೆ
* ಸ್ಥಳೀಯ ಪ್ರಸಾರ ಪದ್ಧತಿಯಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರ.

## ಸರದಿಯ ಸಾಲಿನಲ್ಲಿ ಯಾತ್ರಿಕರ ಸೌಲಭ್ಯಗಳು :

ಸರದಿಯ ಸಾಲಿನ ಕೋಣೆಗಳಲ್ಲಿ ಸ್ವಾಮಿಯ ದರ್ಶನಕ್ಕೆಂದು ಯಾತ್ರಿಕರು ಕಾಯುವ ಸಮಯವನ್ನು ಕಡಿಮೆ ಮಾಡುವಂತಹ ಅನೇಕ ಹೊಸಹೊಸ ಕ್ರಮಗಳನ್ನು ತಿ ತಿ ದೇವಸ್ಥಾನಗಳು ಆಲಯದ ದೈನಂದಿನ ಸೇವೆಗಳಲ್ಲಿ ಪ್ರವೇಶಗೊಳಿಸಿವೆ ಜೊತೆಗೇ ಕಾಯುವ ಕೋಣೆಗಳಲ್ಲಿ ಯಾತ್ರಿಕರಿಗೆ ಬೇಸರವಾಗದಂತೆ ಅವರ ಮನಸ್ಸಿಗೆ ಉಲ್ಲಾಸವಾಗುವಂತೆ ಈ ಕೆಲವು ಕ್ರಮಗಳನ್ನೂ ಕೈಗೊಳ್ಳಲಾಗಿದೆ

* ಗಾಳಿ ಬೆಳಕುಗಳ ವಿಶಾಲವಾದ ಆರೋಗ್ಯಕರವಾದ ವಿದ್ಯುತ್ ಪಂಖಗಳಿಂದ ಕೂಡಿದ ಕಾಯುವ ಕೋಣೆಗಳು
* ತಿ ತಿ ದೇ ಕ್ಯಾಂಟೀನಿನಿಂದ ಒಳಗಡೆ ಅಲ್ಪೋಪಹಾರ ಸೌಲಭ್ಯ
* ಆಹಾರದ ಪೊಟ್ಟಣಗಳು ಸರಸವಾದ ದರಗಳಲ್ಲಿ ಸಿಗುವ ಏರ್ಪಾಡು
* ಆಂಧ್ರಪ್ರದೇಶ ಡೈರಿ ಅಭಿವೃದ್ಧಿ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಪ್ರಥಮ ಚಿಕಿತ್ಸೆ
* ಸರದಿಯ ಸಾಲಿನ ಕೋಣೆಗಳಲ್ಲಿ ಶೌಚಗೃಹ ವ್ಯವಸ್ಥೆ
* ಕ್ಲೋಸ್ಡ್ ಸರ್ಕ್ಯೂಟ್ ಟಿ ವಿ ಕಾರ್ಯಕ್ರಮಗಳು
* ಭಕ್ತಿ ಸಂಗೀತ, ಹರಿಕಥೆ ಮೊದಲಾದವುಗಳ ಪ್ರಸಾರ
* ವೈಕುಂಠಂ ಕ್ಯೂಕಾಂಪ್ಲೆಕ್ಸ್ ಸಮೀಪದಲ್ಲಿ ಯಾತ್ರಿಕರು ತಮ್ಮ ವಸ್ತುಗಳನ್ನು ಸುರಕ್ಷಿತಗೊಳಿಸಬಹುದು ಸರದಿಯ ಸಾಲಿನಲ್ಲಿ ನಡೆಯುತ್ತ ಸರಂಜಾಮುಗಳನ್ನು ಹೊತ್ತು ನಡೆಯಬೇಕಾಗಿಲ್ಲ
* ಸರದಿಯ ಸಾಲಿಗೆ ಸೇರುವ ಸ್ಥಳಗಳಲ್ಲಿ ಪಾದರಕ್ಷೆಗಳನ್ನು ಭದ್ರಪಡಿಸುವ ಸೌಲಭ್ಯವಿದೆ
* ವಂಚಕ ದಳ್ಳಾಳಿಗಳಿಂದ ಉದ್ಯೋಗಿಗಳ ಭ್ರಷ್ಟತೆಯನ್ನು ನಿವಾರಿಸಲು ಆಲಯದ ಮಹಾದ್ವಾರದಲ್ಲಿ ಒಬ್ಬ ಅಧಿಕಾರಿಯ ನೇಮಕ ಇವರು ದೂರುಗಳನ್ನೂ ವಿಚಾರಿಸುವರು
* ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರ ಅನುಕೂಲಗಳನ್ನು ನೋಡಿಕೊಳ್ಳಲು ಒಬ್ಬ ಅಧಿಕಾರಿಯ ನೇಮಕ

## ಇತರ ಸೌಲಭ್ಯಗಳು :

* ತಿರುಪತಿಯ ತಿರುಚಾನೂರು ರಸ್ತೆಯಲ್ಲಿನ ಶ್ರೀನಿವಾಸ ಕಲ್ಯಾಣ ಮಂಟಪಗಳಲ್ಲಿ ನಾಲ್ಕು ಮದುವೆಯ ಮಂಟಪಗಳಿದ್ದು ಇಲ್ಲಿ ಗ್ಯಾಸ್ ಒಲೆ ಮೊದಲಾದ ಆಧುನಿಕ ಸೌಲಭ್ಯಗಳುಂಟು ಸರಸವಾದ ಸೇವಾಶುಲ್ಕದ ಈ ಕಲ್ಯಾಣಮಂಟಪಗಳ ಬಾಡಿಗೆಯ ಕಾಲವ್ಯವಧಿ ಮಧ್ಯಾಹ್ನ 3 ರಿಂದ ಮಧ್ಯಾಹ್ನ 3 ಗಂಟೆ. ಶ್ರೀನಿವಾಸಕಲ್ಯಾಣ ಮಂಟಪದ ಎದುರು ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳ ಸಮುದಾಯದಲ್ಲಿ ಹೆಚ್ಚು ಕಲ್ಯಾಣ ಮಂಟಪಗಳುಂಟು

ಎಸ್.ವಿ ಅತಿಥಿಗೃಹ ಕ್ಯಾಂಟೀನ್ ತಿರುಮಲೆಯ ಎಸ್ ವಿ ಅತಿಥಿಗೃಹದ ಕ್ಯಾಂಟೀನ್‌ನಲ್ಲಿ ಸರಸದರಗಳಲ್ಲಿ ಆರೋಗ್ಯಕರವಾದ ಸಂತುಲಿತ ಊಟ ಉಪಹಾರಗಳು ದೊರೆಯುತ್ತವೆ.

ಉಚಿತ ಭೋಜನ : ಸ್ವಾಮಿಯನ್ನು ದರ್ಶಿಸಿ ಹೊರಬರುವಾಗ ಆಲಯದಲ್ಲಿ ನೀಡಲಾಗುವ ಉಚಿತ ಭೋಜನ ಚೀಟಿಗಳ ವಿತರಣೆಯ ಮೂಲಕ ತಿರುಮಲೆಯ ತಿ ತಿ ದೇ ಕ್ಯಾಂಟೀನ್‌ನಲ್ಲಿ ಬೆಳಗ್ಗೆ 10-00 ಗಂಟೆಯಿಂದ ರಾತ್ರಿ 1-00 ಗಂಟೆಯವರೆಗೆ ಉಚಿತವಾಗಿ ಸಂತುಲಿತ ಭೋಜನ ನೀಡಲಾಗುತ್ತದೆ

ಉಚಿತ ವೈದ್ಯಕೀಯ ಚಿಕಿತ್ಸೆ . ಶೇಷಾದ್ರಿನಗರದ ಬಳಿಯ ಅಶ್ವಿನಿ ಆಸ್ಪತ್ರೆಯಲ್ಲಿ ಯಾತ್ರಿಕರಿಗೆ ಉಚಿತವಾಗಿ ವೈದ್ಯ ಸೌಲಭ್ಯ ದೊರೆಯುತ್ತದೆ

ಅಂಚೆ ಮತ್ತು ತಂತಿ ಕೇಂದ್ರ ಸ್ವಾಗತಕಚೇರಿಯ ಬಳಿ ಅಂಚೆ ಕಚೇರಿ, ತಂತಿ ಕಚೇರಿಗಳಿವೆ

ಉಚಿತ ಬಸ್ ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು, ಆಲಯ ಮೊದಲಾದವನ್ನು ಮುಟ್ಟುವಂತೆ ಉಚಿತ ಬಸ್‌ಗಳ ಓಡಾಡುತ್ತವೆ

ಏರ್‌ಲೈನ್ಸ್ ಕೋಚು ತಿರುಪತಿಯ ಬಳಿಯ ವಿಮಾನ ನಿಲ್ದಾಣದಿಂದ ತಿರುಮಲೆಗೆ ಹಾಗೂ ಹಿಂದಕ್ಕೆ ವಿಮಾನಯಾತ್ರಿಕರ ಅನುಕೂಲಕ್ಕಾಗಿ ಎ ಪಿ ಎಸ್ ಆರ್ ಟಿ ಸಿ ಯವರು ಲಕ್ಸುರಿ ಕೋಚನ್ನು ನಡೆಸುತ್ತಾರೆ

ಚಿನ್ನ ಹಾಗೂ ಬೆಳ್ಳಿ ಪದಕಗಳ ಮಾರಾಟ ತಿರುಮಲೆಯ ಆಲಯದ ಒಳಗಡೆ ಸ್ವಾಮಿಯ ಹುಂಡಿಯ ಎದುರು ಬಾಗದಲ್ಲಿ, ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಚಿನ್ನ ಹಾಗೂ ಬೆಳ್ಳಿಯ ಪದಕಗಳನ್ನು ಕೊಂಡುಕೊಳ್ಳಬಹುದು

ಕಲ್ಯಾಣಕಟ್ಟೆ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಯಾತ್ರಿಕರು ತಮ್ಮ ಹರಕೆಯ ಕೂದಲನ್ನು ಉಚಿತವಾಗಿ ನೀಡಬಹುದು ಕಾಟೇಜುಗಳ ಬಳಿಯಲ್ಲಿ ಇದಕ್ಕೆ 10 ರೂಪಾಯಿ ಶುಲ್ಕ

ಪ್ರಕಟಣೆಗಳ ಮಾರಾಟ ತಿರುಮಲೆಯ ಆರ್ ಟಿ ಸಿ ಬಸ್ ನಿಲ್ದಾಣದಲ್ಲಿ ಹಾಗೂ ತಿರುಪತಿಯಲ್ಲಿನ ಮೊದಲಸತ್ರ, ಶ್ರೀ ಗೋವಿಂದರಾಜಸ್ವಾಮಿ ಗುಡಿಯ ಬಳಿಯ ಧ್ಯಾನಮಂದಿರ, ರೈಲ್ವೆ ನಿಲ್ದಾಣಗಳಲ್ಲಿ ತಿ ತಿ ದೇವಸ್ಥಾನಗಳು ಪ್ರಕಟಿಸುವ ಎಲ್ಲ ಗ್ರಂಥಗಳು, ಧ್ವನಿಸುರುಳಿಗಳು, ದೊರೆಯುತ್ತವೆ

ರೈಲ್ವೆ ಮುಂಗಡ ಕಾಯ್ದಿರಿಸುವಿಕೆ ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿರುವ ರೈಲ್ವೆ ಕೌಂಟರಿನಲ್ಲಿ ಬಸ್ - ರೈಲು ಪ್ರಯಾಣಗಳನ್ನು ಮುಂಗಡ ಕಾಯ್ದಿರಿಸಬಹುದು

ವಾಹನ ದುರಸ್ತಿ ತಿರುಮಲೆಯ ಹಾದಿಯಲ್ಲಿ ಕೆಟ್ಟು ನಿಲ್ಲುವ ವಾಹನಗಳ ದುರಸ್ತಿಗಾಗಿ ಒಂದು ದುರಸ್ತಿ ವಾಹನವು ಮೆಕ್ಯಾನಿಕ್ ಹಾಗೂ ಉಪಕರಣಗಳೊಂದಿಗೆ ಸಿದ್ಧವಾಗಿರುತ್ತದೆ ತಿರುಪತಿಯ ಅಲಿಪಿರಿ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿ ವಿಚಾರಿಸಿ ಈ ಸೌಲಭ್ಯ ಪಡೆಯಬಹುದು

ಪುರೋಹಿತ ಸಂಘ ತಿರುಮಲೆಯಲ್ಲಿ ವೈದಿಕ ಕ್ರಿಯೆಗಳನ್ನು ಯಾತ್ರಿಕರು ನಡೆಸಲು ಸುಲಭವಾಗುವಂತೆ, ಈ ಕೆಲಸಗಳನ್ನು ನಿರ್ವಹಿಸಬಲ್ಲ ಪಾಂಡಿತ್ಯ ಅನುಭವಗಳನ್ನುಳ್ಳ ಪುರೋಹಿತರ ಸಂಘವನ್ನು ತಿ ತಿ ದೇ ಸಂಘಟಿಸಿದ ಸದರಿ ಕ್ರಿಯೆಗಳ ಶುಲ್ಕವನ್ನೂ ತಿ ತಿ ದೇ ನಿರ್ಧರಿಸಿ ಪ್ರಕಟಿಸಿದ ಸಂಕಲ್ಪ, ನಾಮಕರಣ, ಚೌಲ, ಉಪನಯನ, ವಿವಾಹ, ಪಿಂಡಪ್ರದಾನ ಮೊದಲಾದ ವೈದಿಕ ಕ್ರಿಯೆಗಳನ್ನು ಮಾಡಬಯಸುವವರು ಪುರೋಹಿತ ಸಂಘದಲ್ಲಿ ವಿಚಾರಿಸಬಹುದು ತಿ ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಬಹುದು



ಸಾರಿದೆನೊ ನಿನ್ನ ವೆಂಕಟರನ್ನ -ಪ-

ನೀರಜ ನಯನನೆ ನಿರ್ಮಲ ಗುಣ ಪೂರ್ಣ -ಅ ಪ -

ಅನಾಥನೋ ನಾನು ಎನಗೆ ಬಂಧುವೋ ನೀನು
ನಿನ್ನವನೆಂದು ನೋಡೋ ನೀನಾಗಿ ದಯಮಾಡೋ -1-

ಎನ್ನ ಕುಂದುಗಳನು ಎಣಿಸಲಾಗದೊ ದೇವ
ಪನ್ನಗಾಚಲವಾಸ ಕಾಯೋ ನಿರ್ದೋಷ -2-

ದೇಶ ದೇಶದವರ ಪೊರೆದಂತೆ ಪೊರೆಯೆನ್ನ
ಶೇಷಾಚಲ ಘನ್ನ ಶ್ರೀಶ ಶ್ರೀ ಹಯವದನ -3-

- ಶ್ರೀ ವಾದಿರಾಜಸ್ವಾಮಿಗಳು.

ಸಂದರ್ಶಿಸಿ. ಆನಂದಿಸಿ.

## ಶ್ರೀ ವೆಂಕಟೇಶ್ವರಸ್ವಾಮಿ ಆಲಯ, ತಿರುಮಲೆ.

# ಶ್ರೀ ಪದ್ಮಾವತೀ ಶ್ರೀನಿವಾಸ ಪರಿಣಯ

24-4-99 ರಿಂದ 26-4-99 ವರೆಗೆ



| | | |
|---|---|---|
| 24-4-99 | ಶನಿವಾರ | ಗಜವಾಹನೋತ್ಸವ |
| 25-4-99 | ಭಾನುವಾರ | ಅಶ್ವವಾಹನೋತ್ಸವ |
| 26-4-99 | ಸೋಮವಾರ | ಗರುಡವಾಹಮೋತ್ಸವ |

ವೈಶಾಖ ಶುದ್ಧ ನವಮಿ ದಶಮಿ ಏಕಾದಶಿಗಳಂದು ನಡೆಯುವ ಶ್ರೀ ಪದ್ಮಾವತೀ ಶ್ರೀನಿವಾಸ ಪರಿಣಯದಲ್ಲಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು ಗೃಹಸ್ಥರು ಆರ್ಜಿತ ಸೇವಾಶುಲ್ಕ ರೂ 5000/- (ದಿನಂಪ್ರತಿ) ನೀಡಿ ಭಾಗವಹಿಸಬಹುದು (ಐದುಮಂದಿಗೆ ಆಲಯ ಪ್ರವೇಶ ಹಾಗೂ ರೇಷ್ಮೆಯ ವಸ್ತ್ರ ಬಹುಮಾನವುಂಟು ಪ್ರಸಾದ-5 ದೊಡ್ಡಲಾಡು 5 ವಡೆ) ಹೆಚ್ಚಿನ ವಿವರಗಳಿಗೆ ಬಳಿಯಲ್ಲಿನ ತಿ ತಿ ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.





ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 29 ಏಪ್ರಿಲ್ 1999 ಸಂಚಿಕೆ - 11




ಮುಖಚಿತ್ರ ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ವಜ್ರಕಿರೀಟ

ಹಿಂಬದಿಯಲ್ಲಿ ಶ್ರೀಮದ್ರಾಮಾನುಜರು.


ಗೌರವ ಸಂಪಾದಕರು
ಡಾ|| ಐ.ವಿ. ಸುಬ್ಬಾರಾವ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ ದೇ ತಿರುಪತಿ

ಸಂಪಾದಕ
ಡಾ॰ ಎನ್ ಎಸ್ ರಾಮಮೂರ್ತಿ,

ಉಪಸಂಪಾದಕ
ಬಿ ಎನ್. ಶ್ರೀನಿವಾಸನ್, ಎಂ ಎ.

ಮುದ್ರಣ
ಎಂ ಲಕ್ಷ್ಮಣ್‌ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

ಬಿಡಿ ಪ್ರತಿ 4-00
ವಾರ್ಷಿಕ ಚಂದಾ 48-00


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ - ಸಂ||




ಒಂದು ಕಾಲವಿತ್ತು - ಆಳ್ವಾರುಗಳು ಹರಿದಾಸರು ಹಾಡಿದ ಕೀರ್ತನೆಗಳನ್ನು ನೆನೆಯುತ್ತ ಬದುಕು ಪಾವನಗೊಳಿಸಿಕೊಳ್ಳಬಹುದಾಗಿದ್ದ ಕಾಲ. ಕಲಿಯುಗದಲ್ಲಿ ಹರಿಕೀರ್ತನೆಯಿಂದಲೇ ಮೋಕ್ಷವನ್ನು ಪಡೆಯಬಹುದೆಂದು ಮಹರ್ಷಿಗಳು ಖಚಿತವಾಗಿ ತಾವು ನಂಬಿದ್ದೇ ಅಲ್ಲದೆ ಅದನ್ನೇ ಸುತ್ತಲ ಜನಕ್ಕೂ ತಿಳಿಸುತ್ತ ನಡೆದಿದ್ದ ಕಾಲ. ಆಳ್ವಾರುಗಳಲ್ಲಿಯೇ ಹಲವು ಹನ್ನೊಂದು (ಅವರು ಒಟ್ಟು ಹನ್ನೆರಡು ಮಂದಿ) ಜನ ಬೆಟ್ಟದ ಮೇಲಿನ ಭಗವಂತನನ್ನು ಕುರಿತು ಹಾಡುವುದೇ ಪರಮಗುರಿಯೆಂದು ತಿಳಿದು ನಡೆದವರು. ತಿರುಮಲೆಯಲ್ಲಿ ತರುವಾಗಿ, ಬೆಟ್ಟದ ಹಾದಿಯ ಕಲ್ಲಾಗಿ, ಪುಷ್ಕರಿಣಿಯ ಮೀನಾಗಿ ಬಾಗಿಲ ಹೊಸಿಲಾಗಿ ನಿನ್ನ ಹವಳದ ಬಾಯ ನೋಡುವಾಸೆ ಎಂದು ಅಂತರಂಗದ ಬಾಗಿಲನ್ನು ಅವನಿಗಾಗಿ ತೆರೆದಿಟ್ಟು ಕರೆದವರು. ಅವರ ಪಾಶುರಗಳ ಪರಂಪರೆಯಲ್ಲಿ ಬಂದವರೇ ನಾಥಮುನಿ, ಯಾಮುನಾಚಾರ್ಯ- ಮೊದಲಾದ ಪೂರ್ವಾಚಾರ್ಯರು. ಹರಿಯ ಹಿರಿಮೆಯನ್ನು ಎಲ್ಲರೂ ಅರಿಯದೇಕು ಎಂಬುದೇ ಅವರ ಗುರಿಯಾಯಿತು. ಎಂತಲೇ ಹಲವು ಹತ್ತು ರೀತಿಯಲ್ಲಿ ತಮ್ಮ ಜೀವನದ ಮಾರ್ಗದಲ್ಲಿ ತಿಳಿವನ್ನು ಹರಡುತ್ತ ನಡೆದರು. ಅವರಿಗೆ ತಾವು ತಿಳಿಯುವುದು ಮಾತ್ರವೇ ದೊಡ್ಡದಾಗಲಿಲ್ಲ, ಇತರರಿಗೆ ತಿಳಿಗೊಳಿಸುವುದೂ ದೊಡ್ಡದಾಯಿತು. ಹಾಗಾಗಿ ನಾಥಮುನಿಗಳು ನಾಲಾಯಿರವನ್ನು ಸಂಶೋಧಿಸಿ ಸಂಪಾದಿಸಿದರೆ, ಯಾಮುನರು ಶಿಷ್ಯರನ್ನು ಸಂಗ್ರಹಿಸಿ ತಮ್ಮ ನಂತರವೂ ತಮ್ಮ ಕಾರ್ಯ ಮುಂದುವರೆಯುವಂತೆ ಬದುಕಿದ್ದಾಗಲೇ ಬುನಾದಿಯನ್ನುಂಟಾಗಿಸಿದರು.

ಇಂತಹ ಒಂದು ಭದ್ರ ಪರಂಪರೆಯಲ್ಲಿ ಬಂದವರು ಭಗವದ್ರಾಮಾನುಜರು - ಎಂದಮೇಲೆ ಅವರಲ್ಲಿನ ಮಾನವಾನುಕಂಪ, ಸರ್ವರಿಗೂ ಮೇಲನ್ನೇ ಬಯಸುವ ಸೌಶೀಲಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗಲಾರದು. ತಿರುಮಂತ್ರವನ್ನು ಆಲಯದ ಗೋಪುರದಿಂದ ಘೋಷಿಸಿದ್ದೇ ಅಲ್ಲದೆ ಎಲ್ಲರನ್ನೂ ತಮ್ಮೊಂದಿಗೆ ಕರೆದೊಯ್ಯುವ ಹೃದಯ ವೈಶಾಲ್ಯವನ್ನು ತೋರಿದರು. ಹರಿಗೆ ಬೇರೆ ಇಲ್ಲವಾದ ಮೇಲೆ ಹರಿ ಭಕ್ತರಲ್ಲಿ ಬೇರೆಯೇಕೆ ಎಂಬುದು ಅವರ ದೃಷ್ಟಿಯಾಯಿತು. ಹಾಗಾಗಿ ಎಲ್ಲ ಒಂದೇ ಎಂಬ ಸಮತಾಭಾವವನ್ನು ಹರಡಲು ಪ್ರಯತ್ನಿಸಿದರು. ಅದು ಇತಿಹಾಸವಾಯಿತು ಎಂಬುದು ಬೇರೆ ಸಂಗತಿ. ಅಂದಿಗೆ ಅದೊಂದು ಅದ್ಭುತ ಕ್ರಾಂತಿಕಾರಿ ಯೋಚನೆಯಾಗಿತ್ತು ಎಂಬುದನ್ನು ನೆನೆಯದೇಕು.

ಇಂತಹ ಹಿರಿತನದ ಹರವನ್ನು ಹೊಂದಿದ ರಾಮಾನುಜರಿಗೆ ಇದ್ದ ನೆಲದಲ್ಲಿ ಔದಾರ್ಯ ಕಂಡುಬರಲಿಲ್ಲ - ಹಾಗಾಗಿ ಕರ್ನಾಟಕಕ್ಕೆ ಬರುವಂತಾಯಿತು ಎಂಬುದು ಕರ್ನಾಟಕದ ಅದೃಷ್ಟವೆಂದಷ್ಟೇ ತಿಳಿಯದೇಕು. ಕಾರಣ ಅವರ ಪ್ರವಾಸ ಪ್ರಸಾರಗಳು ಪುನಃ ರಂಗನಾಥ ವರದರಾಜರೆಡೆಯಲ್ಲಿ ತಿರುಗಿದ್ದು. ತಿರುಮಲೆಯ ಆಲಯದ ಪೂಜಾವ್ಯವಸ್ಥೆಯನ್ನು ಸುಗಮಗೊಳಿಸಿದ ಆಚಾರ್ಯರಿಗೆ ಇಂತಹದೇ ಕಡೆಯಲ್ಲಿ ನಿಲ್ಲುವ ಅನಿವಾರ್ಯ ಎಂದೂ ಇರಲಿಲ್ಲವಾಗಿ ಅವರು ಅನುಗ್ರಹಿಸುತ್ತ ನಡೆದದ್ದಕ್ಕೆ ಬೇರೆ ಬೇರೆ ಕಾರಣಗಳು, ನೆಪಗಳು ಅಷ್ಟೆ. ಹಾಗಾಗಿ ಕರ್ನಾಟಕದ ಭಾಗ್ಯವನ್ನು ನೆನೆದು ಸಂತಸ ಪಡುವಂತಾಗದೇಕು. ಅಂದು ಐತಿಹಾಸಿಕವಾಗಿ ಕಾರಣಗಳೇನೇ ಇದ್ದರೂ ಇಂದು ಅವರ ಕರ್ನಾಟಕ ಪ್ರವೇಶದ ಒಂಭೈನೂರು ವರ್ಷವಾಗುವ ಈ ಹೊತ್ತಿನಲ್ಲಿ ಅವರನ್ನು ನೆನೆಯಲು ಭಾಷೆ ಅಡ್ಡಿಯಾಗಲಾರದು.

ರಾಮಾನುಜ ರಥ ಶ್ರೀ ಪೆರಂಬುದೂರಿನಿಂದ ಹರಿದು ಹೊರಟಿದೆ; ಅವರು ಅಂದು ನಡೆದ ಎಡೆಗಳಲ್ಲೆಲ್ಲ ಹರಿದಾಡಿ ಅವರ ಮಾತಿನ, ಉಪದೇಶದ, ಸೌಧರ್ಮದ ಸಂದೇಶವನ್ನು ಸಾರುತ್ತ ನಡೆದಿದೆ ರೇಷ್ಮೆ ರಸ್ತೆ, ಪ್ರವಾಸ ರಸ್ತೆ, ಸ್ನೇಹ ರಸ್ತೆಗಳನ್ನೆಲ್ಲ ಹಿಂಬಾಲಿಸಿ ಹೋಗುತ್ತ ಇಪ್ಪತ್ತನೆಯ ಶತಮಾನದಂಚಿನಲ್ಲಿ ನಿಂತಿರುವ ಈ ಹೊತ್ತಿನಲ್ಲಿ ರಾಮಾನುಜ ಪಥವನ್ನು ಒಮ್ಮೆ ಅನುಸರಿಸಿದರೆ, ಸ್ವಲ್ಪ ಧ್ಯಾನ ಗಮನ ಮಾಡಿದರೆ ಇಪ್ಪತ್ತೊಂದನೆಯ ಶತಮಾನದಲ್ಲಿ ನಡಿಗೆ ಸುಲಭವಾದೀತು. ಹಾದಿಯಲ್ಲಿ ನೀರು ನೆರಳು ತಾತ್ವಿಕವಾಗಿ ಕಂಡೀತು ಎಂದು ಭಾವಿಸಿದರೆ ತಪ್ಪಿಲ್ಲ. ನಡೆಯುವ ಮನ ಮಾಡದೇಕಷ್ಟೆ.

ಚೈತ್ರಾರ್ದ್ರಾ ಸಂಭವಂ ವಿಷ್ಣೋರ್ದರ್ಶನ ಸ್ಥಾಪಕೋತ್ಸುಕಮ್

ತುಂಡೀರ ಮಂಡಲೇ ಶೇಷಮೂರ್ತಿಂ ರಾಮಾನುಜಂ ಭಜೇ



# ಕರ್ನಾಟಕದಲ್ಲಿ ಶ್ರೀ ರಾಮಾನುಜರು - ೯೦೦

ಆಳ್ವಾರ್‌ಗಳು, ಪೂರ್ವಾಚಾರ್ಯರುಗಳು ತಾವು ಕಂಡು ಅನುಭವಿಸಿದ ಭಗವದನುಭವಗಳನ್ನು ಅವರವರ ಸಿರಿನುಡಿಗಳಲ್ಲೇ ಸಾರವತ್ತಾಗಿ ತಿಳಿಸಿ ಜನ ಸಾಮಾನ್ಯರಿಗೂ ಅವರದೇ ಆಡು - ಹಾಡು ಭಾಷೆಯಲ್ಲಿ ಭಗವಂತನನ್ನು ಮುಟ್ಟಿಸಿದರು ಆದರೆ ಆಚಾರ್ಯ ರಾಮಾನುಜರದು ಬಲು ಕ್ರಾಂತಿಕಾರಿ ಜೀವನ ಎಲ್ಲರಲ್ಲೂ ಇರುವ, ಎಲ್ಲವನ್ನೂ ತನ್ನಲ್ಲಿ ಒಳಗೊಂಡ ಒಬ್ಬನೇ ಭಗವಂತನ ಪ್ರಜ್ಞೆ ಎಲ್ಲ ಜನ ಸಾಮಾನ್ಯರಲ್ಲೂ ಮೂಡಿಸಲು ಪ್ರತಿ ಹೆಜ್ಜೆಯಲ್ಲೂ ಶ್ರಮಿಸಿದರು. ಜಾತಿ, ಮತ, ಅಂತಸ್ತು, ಗೌರವ ಏನೂ ಭೇದವಿಲ್ಲದೆ ಒಬ್ಬನೇ ಅಂತರ್ಯಾಮಿಯ ಅರಿವು ಮೂಡಿ ಅವನ ಸೇವೆ ಮಾಡಿ ಧನ್ಯರಾಗುವ ವಿಶಿಷ್ಟ ವಿನೂತನ ದೃಷ್ಟಿ ಅವರದು. ಇದು ಸತ್ಯವೂ ಹೌದು ಅದಕ್ಕೆ ಅವರು ನಡೆದು ತೋರಿದ ದಾರಿಯಲ್ಲಿ ಪ್ರತಿ ಹೆಜ್ಜೆಯೂ ಕ್ರಾಂತಿಕಾರಿಯಾಗಿಯೇ ಮಾರ್ಗದರ್ಶಿ. ಸಮಾಜದ ಕಟ್ಟಕಡೆಯ ಸಾಮಾನ್ಯವ್ಯಕ್ತಿಗೂ ಉಪಯುಕ್ತವಾಗುವಂತೆಯೇ ಅವರ ಚಿಂತನ - ನಡೆ- ನುಡಿ-ಕೃತಿದರ್ಶನ ಎಲ್ಲವೂ ಪರ, ವ್ಯೂಹ, ವಿಭವ, ಅರ್ಚಾ, ಅಂತರ್ಯಾಮಿ - ಮುಂತಾದ ವಿವಿಧ ರೂಪಗಳಲ್ಲಿರುವ ಒಬ್ಬನೇ ಭಗವಂತನ ಈ ರೂಪಗಳಲ್ಲಿ ಆಚಾರ್ಯರು ಎಂದೂ ಭೇದ ಕಾಣಲಿಲ್ಲ.

ರಾಮಾನುಜರು ಶ್ವೇತಗೋಪುರದ ಮೇಲಿನಿಂದ ಸಾರ್ವಜನಿಕವಾಗಿ ಗಂಟಾಘೋಷವಾಗಿ ಸಾರಿದ ತಿರುಮಂತ್ರ ರಹಸ್ಯ ('ನಾನೊಬ್ಬ ನರಕಕ್ಕೆ ಹೋದರೇನಂತೆ - ಎಲ್ಲರೂ ಮುಕ್ತಿ, ಪರಮಾತ್ಮನ ಸಾಹಚರ್ಯ ಹೊಂದುವರಲ್ಲಾ!') ಮಹಾ ಔದಾರ್ಯದ ಯುಗವನ್ನೇ ಪ್ರಾರಂಭಿಸಿತು ಪುಟ್ಟ ಮಕ್ಕಳು ಬರೆದ ಶ್ರೀರಂಗನಲ್ಲೂ, ದೇವಸ್ಥಾನದಲ್ಲೂ ಒಬ್ಬನೇ ರಂಗನನ್ನು ಕಂಡರು; ಜಟ್ಟಿ ಧನುರ್ದಾಸ - ಅವನಪತ್ನಿ ದೇಡಿತಿ, ಷಹಜಾದೆ ವರನಂದಿ, ಮಾನಸಿಕ ಅಸ್ವಸ್ಥಳಾದ ಕರ್ನಾಟಕ ರಾಜನ ಕುವರಿ, ಗೋವಿಂದರು ಚಿಕಿತ್ಸೆಮಾಡಿದ ಸರ್ಪ, ಶ್ರೀ ತಿರುನಾರಾಯಣಸ್ವಾಮಿಯನ್ನು ಹುತ್ತದಿಂದ ಬೇರ್ಪಡಿಸಿ ನಮಗೆಲ್ಲಾ ದರ್ಶನ ಮಾಡಿಸಲು ಸಹಾಯ ಮಾಡಿದ ಮುಗ್ಧ ಗ್ರಾಮೀಣ ಬಾಂಧವರಾದ 'ತಿರುಕುಲತ್ತಾರ್' (ಈ 'ಪರಮಾತ್ಮನ ಜನ' ಎಂಬ ಹರಿಜನೋದ್ಧಾರ ಅಂದೇ ಆರಂಭ) - ಹೀಗೆ ಪ್ರತಿ-ಪ್ರಾಣಿ-ಪಕ್ಷಿ ಮಾನವರಲ್ಲೂ ಮಾಧವನನ್ನೇ ಕಂಡು ಅವನ ಸೇವೆಯಲ್ಲೇ ಧನ್ಯತೆ ಕಂಡರು ವಿಶಿಷ್ಟವಾಗಿ ನೊಂದವರ, ದೀನ ದಲಿತರ ಶೋಷಿತರ ಸೇವೆ ಅವರ ನಿತ್ಯ ಕೈಂಕರ್ಯವಾಗಿತ್ತು. ಶರಣಾಗತಿ ಹಾಗೂ ಕೈಂಕರ್ಯ, ಆಚಾರ್ಯರು ವಿಶ್ವಕ್ಕೆ ನೀಡಿದ ಬಾಳದಾರಿಯ ಕೈದೀವಿಗೆ (ಕ್ರಿ.ಶ. ೧೦೧೭ ರಿಂದ ಕ್ರಿ.ಶ. ೧೧೩೭)

# ಸಮಾಜರೂಪೀ ಶ್ರೀನಿವಾಸ

- ಎಂ. ಸಿ. ನರಸಿಂಹನ್.

ಹೊರಗಿನ ಪರೆ ಕಳಚಿ, ಒಳಗಿನ ಒಂದೇ ಪರಂಜ್ಯೋತಿಯ ಪ್ರಜ್ಞೆ ಮೂಡಿದಾಗ ಭೇದ ಅಳಿದು ತಾನಾಗಿಯೇ ಅನುಕಂಪ, ಸೌಹಾರ್ದ, ಪ್ರೀತಿ, ವಿಶ್ವಾಸ, ದೈವಭಕ್ತಿ, ಧೈರ್ಯ, ದೈವನಂಬಿಕೆ, ಔದಾರ್ಯ, ಶ್ರದ್ಧೆ - ಎಲ್ಲ ಕಾರ್ಯದಕ್ಷತೆಗೆ ಪೂರಕವಾಗಿ ಉಂಟಾಗುತ್ತವೆ. ನೊಂದವರ ಕಣ್ಣೀರು ಒರೆಸಿ, ಮತ್ತೆ ಆ ಕಣ್ಣೀರು ಬಾರದಂತೆ ಮುಂಜಾಗ್ರತೆಕ್ರಮ ವಹಿಸುವ ರಾಮಾನುಜ ಸೇವಾಸಂಸ್ಕೃತಿ, ಈಗಿನ ಮಾನಸಿಕ ಒತ್ತಡದ ಯುಗದಲ್ಲಿ ವ್ಯಕ್ತಿಗೂ, ಸಮಾಜಕ್ಕೂ ಶ್ರೀರಾಮರಕ್ಷಾಮಂತ್ರ. ಆದ್ದರಿಂದಲೇ ಆಚಾರ್ಯ ರಾಮಾನುಜರು ನಡೆದು ತೋರಿದ ದಾರಿ ಸಾರ್ವಕಾಲಿಕವಾಗಿ, ಸರ್ವದೇಶ ಸಮನ್ವಯವಾಗಬಲ್ಲುದು ವೈಜ್ಞಾನಿಕವಾಗಿಯೂ ಈ ಅಂತರ್ಯಾಮಿತ್ವ ಸತ್ಯ. 'ನಮಃ' ಎಂದರೇನೇ 'ಎಲ್ಲವೂ ಭಗವಂತನದು, ನಮ್ಮದಲ್ಲ' ಎಂಬ ಸಹಕಾರ ಬಾಳ್ವೆ, ಶಾಂತಿಸಮಾಧಾನ ಸೂತ್ರ, ಸ್ವಯಂ ಪ್ರಕಾಶ; ಆಚಾರ್ಯರು ಆರಂಭಿಸಿದ ಭಕ್ತಿಪಂಥದ ಈ ವೇದೋಪಾಸನೆ - ನಾದೋಪಾಸನೆಯ ಕಾವೇರಿ ನಾಡೆಲ್ಲ ಹರಿದು ಭಾವೈಕ್ಯತೆ ಪ್ರಸರಿಸುತ್ತಿದೆ

ಭಗವಂತ ಈ ವಿಶಾಲವಿಶ್ವವನ್ನು ಎಲ್ಲರ ಸದುಪಯೋಗಕ್ಕಾಗಿ, ಸಹಕಾರ - ಸಹಯೋಗದಿಂದ ಪ್ರೀತಿ ವಿಶ್ವಾಸದಿಂದ ಬಾಳಲು ಸೃಷ್ಟಿಸಿಕೊಟ್ಟಿದ್ದಾನೆ. ಜೀವಕೋಟಿಗಳಲ್ಲಿ ಮಾನವನನ್ನು ತನ್ನದೇ ಅಂಶಗಳಿಂದ ತುಂಬಿ ಯಂತ್ರಗಳು, ಯಂತ್ರೋಪಕರಣಗಳು, ವಸ್ತುವಿಶೇಷಗಳು, ಇತರ ಜೀವಿಗಳು, ಪಂಚಭೂತಗಳು, ಹಣ, ಕಾಲ ಮುಂತಾದ ಸಂಪನ್ಮೂಲಗಳ ಗಳಿಕೆ, ಒಳ್ಳೆಯ ಬಳಕೆ, ಉಳಿಕೆ ಸಂವರ್ಧನೆಗಾಗಿ ನಮ್ಮೆಲ್ಲ ಜೀವಿಗಳನ್ನೂ ಬೇಕಾದ ಇತರರಿಗೂ ನೀಡಿ ತಾನೂ ಅನುಭವಿಸಿ ಇತರರ ಆನಂದದಲ್ಲಿ ತಾನು ಸಂತೋಷ ಪಡಲೆಂದೇ ಸೃಷ್ಟಿಸಿದ್ದಾನೆ. ಆಗಲೇ ಅರಿಷಡ್ವರ್ಗಗಳಿಂದ ಮುಕ್ತನಾದ ಮಾನವ ಭೂಮಿಯ ಈಗ ಉಳಿಸಿರುವ ಹಸಿರು ಭೂಭಾಗವನ್ನಾದರೂ ಉಳಿಸಿಕೊಂಡು ಮುಂದಿನ ಪೀಳಿಗೆಗೆ 'ಒಂದೇವಿಶ್ವ - ಒಂದೇಮನ - ಒಂದೇ ಆತ್ಮಚೇತನ'ವನ್ನಾಗಿ ನೀಡಬಹುದು. ಲಭ್ಯವಿರುವ ಸಂಪನ್ಮೂಲಗಳ ಸದ್- ವಿತರಣೆ, ಬಳಕೆ, ಸತತ ಸವೆಯುವ, ಖರ್ಚಾಗುವ ಭಾಗಗಳ ಪರಿವೀಕ್ಷಣೆ, ಅದರ ರಕ್ಷಣೆ, ರಿಪೇರಿ ಇಲ್ಲವೆ ಬದಲಾಯಿಸುವಿಕೆ, ಅನಾಹುತ, ಅಡೆತಡೆ, ಅಪಘಾತ, ಖಾಯಿಲೆ ಮುಂತಾದವುಗಳ ವಿಶ್ಲೇಷಣೆ, ಇವಕ್ಕೆ ಕಾರಣೀಭೂತವಾದ ಕೆಟ್ಟಸ್ಥಿತಿ - ಕೆಟ್ಟ ಅಭ್ಯಾಸಗಳನ್ನು ತಡೆಗಟ್ಟಲು ಸತತ ದೋಷ ಪರಿವೀಕ್ಷಣೆ, ನಿವಾರಣೆಗಳ ಪೂರ್ವನಿಯೋಜಿತ ರಕ್ಷಣಾಕ್ರಮ - ಈ ಸುವ್ಯವಸ್ಥಿತ ಶಿಕ್ಷಣಾಶ್ರಮದಲ್ಲಿ ಸಂಕಟ ಬಂದಾಗ ಮಾತ್ರ ವೇಂಕಟರಮಣ ಅಲ್ಲ ಸದಾ ವೇಂಕಟರಮಣ' ಆಗಲೇ ಪ್ರಾಕೃತಿಕ ಅನಾಹುತಗಳಿಲ್ಲದೆ ಮಾನವೀ (ದಾನವ ಮನ) ಕೃತ ಅನಾಹುತಗಳನ್ನೂ ಕಮ್ಮಿ ಮಾಡಬಹುದು ಇದಕ್ಕೆ ಆಚಾರ್ಯ ರಾಮಾನುಜರು ತೋರಿದ ಶರಣಾಗತಿ ಮಾರ್ಗ, ದೈವನಂಬಿಕೆ, ಸದಾ ಶ್ರೀನಿವಾಸನ ಜತೆ ನೀಡುವ ಶ್ರೀ ರಾಮಾನುಜ ಸಂಸ್ಕೃತಿ ಕೈದೀವಿಗೆ. ತಿರುಮಲೈ ಬ್ರಹ್ಮೋತ್ಸವಗಳು ಈ ರಕ್ಷಿತ ಸಂಸ್ಕೃತಿಗೆ ಉದಾಹರಣೆ ಸಮಾಜರೂಪೀ ಶ್ರೀನಿವಾಸ ಇಲ್ಲಿ ನಿತ್ಯ ಪ್ರತ್ಯಕ್ಷ



ಬಹುಧಾನ್ಯ ಸಂವತ್ಸರ ನಮ್ಮ ಪಾಲಿಗೆ ಒಂದು ಮಹತ್ವಪೂರ್ಣ ಸಂವತ್ಸರ. ಸುಮಾರು ಒಂಭೈನೂರು ವರ್ಷಗಳ ಹಿಂದೆ ಕರ್ನಾಟಕಕ್ಕೆ ಆಚಾರ್ಯ ರಾಮಾನುಜರ ಶುಭ ಪದಸ್ಪರ್ಶ ಆದ ಸರ್ವ ಸಂವತ್ಸರ. ಈ 'ಸೇವಾ ಸದವಕಾಶ ಸಂವತ್ಸರ'ವನ್ನು ಕರ್ನಾಟಕದ ಹಾಗೂ ಭಾರತದ ಎಲ್ಲರೂ ಸೇರಿ, ಎಲ್ಲರಲ್ಲಿರುವ ಒಂದೇ ಪರಂಜ್ಯೋತಿಯ ಪ್ರಜ್ಞೆ ಮೂಡಿಸಿ ಹೆಚ್ಚು ಅರ್ಥಪೂರ್ಣವಾಗಿ ಪರಸ್ಪರ ಭಾವೈಕ್ಯತೆ ಸಂವರ್ಧನೆಗಾಗಿ, ವಿಶ್ವಶಾಂತಿ - ಸಮಾಧಾನಗಳಿಗಾಗಿ ಆಚರಿಸಿದರೆ ಆಚಾರ್ಯ ರಾಮಾನುಜರು ಬರಿಯ ವ್ಯಕ್ತಿ ಆಗದೆ 'ಪ್ರಬಲ ಭಾವೈಕ್ಯತಾಶಕ್ತಿ'ಯಾಗಿ ಅವರ ಆಸೆ ನೆರವೇರಿದಂತಾಗುತ್ತದೆ. ಆಗ 'ಬಹುದಾನ್ಯ' ಬಹುಫಲಪ್ರದ

ಶೇಷರೂಪಿಯಾಗಿ ಆಚಾರ್ಯರಾಮಾನುಜರು ಶ್ರೀನಿವಾಸನಿಗೆ ಆವಾಸ, ಶಯನ, ಆಸನ, ಹಾವುಗೆ, ಕೋಮಲ - ಸಂಕೋಚವಿಕಾಸಗುಣದ ತಲೆದಿಂಬು, ವೃತ್ತಿ ಇತ್ಯಾದಿಗಳಾಗಿ ಸರ್ವಶೇಷಿಯ ಸತತ ಸೇವೆ ಮಾಡುತ್ತಾ ತಿರುಮಲೈಯೇ ಆಗಿ ಎಲ್ಲರಿಗೂ ಶೇಷ ವಿಶೇಷತೆ ತೋರುತ್ತಿದ್ದಾರೆ. ಪರಮ ಪ್ರಭುವಾದರೂ ನತವತ್ಸಲ, ಆಶ್ರಿತಪಾರಿಜಾತ, ಶ್ರೀನಿವಾಸ. ಅದಕ್ಕೆ ಮಾನವ ಸೇವೆಯಲ್ಲೇ ಮಾಧವನ ಸೇವೆ ಕಾಣುವ ವಿಶಿಷ್ಟದರ್ಶನ ಆಚಾರ್ಯ ರಾಮಾನುಜರ ದಾರಿ.

ಕನ್ನಡದ 'ಕೈ' ಹೇಳಿದಂತೆ ಹುಟ್ಟಿಸಿದ ಭಗವಂತನಿಗೆ ನಾವು ಕೊಡಬೇಕಾದ ಬಾಡಿಗೆ ಅಂದರೆ ನೊಂದವರಿಗೆ ಸಹಾಯ ಸಾಂತ್ವನ; ಆ ನೋವು ಮತ್ತೆ ಬಾರದಂತೆ ಮಾಡಲು ಮುಂಜಾಗ್ರತಾ ರಕ್ಷಣೆ, ಭಗವಂತ ಮಾನವನಿಗೆ ಪ್ರಬಲ ಬುದ್ಧಿ ಶಕ್ತಿ ನೀಡಿರುವುದನ್ನು ವಿಶ್ವವಿನಾಶಕ್ಕೋ, ಸಹಜೀವಿಗಳ ಅಳಿವಿಗೋ ಏಕಚಕ್ರಾಧಿಪತ್ಯ ಕಾಂಕ್ಷೆಗೋ ಉಪಯೋಗಿಸಿದರೆ ಭಸ್ಮಾಸುರ ಹಿರಣ್ಯಕಶಿಪು ದುರ್ಯೋಧನ ಮುಂತಾದ ದಾನವೀಶಕ್ತಿಗಳ ಪ್ರಾಬಲ್ಯ ಪುನರಾವರ್ತನೆ ಆದೀತು. ಈಗಾಗಲೇ ಮಾನವ ಇತಿಹಾಸದಲ್ಲಿ ಶಾಂತಿಕಾಲಕ್ಕಿಂತ ಯುದ್ಧ, ದೌರ್ಜನ್ಯಗಳ ಕಾಲವೇ ಜಾಸ್ತಿ. ಅಂಥ ದಾನವೀಯ ಮಾನವರನ್ನು ಉದ್ಧರಿಸಲು ಭಗವಂತ ಹಲವು ರೂಪಗಳಲ್ಲಿ ಅವತಾರಗಳಲ್ಲಿ ದುಷ್ಟಶಿಕ್ಷಣ, ಶಿಷ್ಟರಕ್ಷಣ ಮಾಡುತ್ತಲೇ ಬಂದಿದ್ದಾನೆ. ನರನಾರಾಯಣರ ಪ್ರಚಂಡ ಅಂತರ್ಯಾಮಿತ್ವದ ಶಕ್ತಿಯ ಮುಂದೆ ಯಾವ ದಾನವೀ ಶಕ್ತಿಯೂ ನಿಲ್ಲಲಾರದು. ಶ್ರೀನಿವಾಸನಲ್ಲಿ ಶರಣಾಗತಿ ಆಚಾರ್ಯರು ತೋರಿದ ವಿಶ್ವಶಾಂತಿಗೆ ಪರಮ ಗತಿ.



# ಮೇಲುಕೋಟೆ ರಾಮಾನುಜರು

- ಜಗ್ಗು ನರಸಿಂಹಾಚಾರ್ಯ.

ನಮ್ಮ "ಗುರುಪರಂಪರಾಪ್ರಭಾವ" ಮೊದಲಾದ ಗ್ರಂಥಗಳಲ್ಲಿ "ಶ್ರೀ ರಾಮಾನುಜಾಚಾರ್ಯರು ಮೇಲುಕೋಟೆಗೆ ದಯಮಾಡಿಸಿ, ಹುತ್ತದಿಂದ ಮುಚ್ಚಿಹೋಗಿದ್ದ ಆನಂದಮಯ ದಿವ್ಯ ವಿಮಾನವನ್ನು ಹುತ್ತನ್ನು ತೆಗೆಸಿ ಜೀರ್ಣೋದ್ಧಾರ ಮಾಡಿದರು" ಎಂದು ಬರೆದಿದ್ದಾರೆ. ಆದ್ದರಿಂದ ಇದು ಅರಣ್ಯವಾಗಿತ್ತು ಎಂದು ತಿಳಿದುಬರುತ್ತದೆ. ಯಾದವಗಿರಿ ಮಾಹಾತ್ಮ್ಯದ ಕೊನೆಯ ಭಾಗದಲ್ಲಿ "ಇಲ್ಲಿ ಅನೇಕ ಜನರು ವಾಸವಾಗಿದ್ದರು" ಎಂದು ತಿಳಿದುಬರುತ್ತದೆ. ಆದರೆ ಈ ಮಧ್ಯೆ ಏನಾಗಿರಬಹುದು? ಅಂದರೆ ಅದು ಮುಂದೆ ಹೇಳಲ್ಪಡುತ್ತದೆ

ಈ ಕಲಿಯುಗದಲ್ಲಿ ಎರಡು ಮೂರು ಸಹಸ್ರ ವರುಷಗಳು ಕಳೆದಮೇಲೆ ದೈವ ಸಂಕಲ್ಪದಿಂದುಟಾದ ಯಾವುದೋ ಕಾರಣದಿಂದ ಆ ಯಾದವಗಿರಿಯಲ್ಲಿದ್ದ ಜನಗಳು ನಷ್ಟರಾದರು. ಮ್ಲೇಚ್ಛರೇ ಬಹಳ ಕಡೆ ರಾಜರಾಗಿದ್ದರು. ಯೋಗಿಗಳಾದ ಋಷಿಗಳು ಈ ಕಲಿಯುಗದ ಜನಗಳ ದುರಾಚಾರ, ಅಜ್ಞಾನಾದಿಗಳಿಂದ ಜುಗುಪ್ಸೆಗೊಂಡು ಯಾರ ಕಣ್ಣಿಗೂ ಗೋಚರವಾಗದೆ ಮಾನಸಾರಾಧನಪರರಾಗಲು, ಆ ಆನಂದಮಯ ದಿವ್ಯವಿಮಾನವು ಗಿಡ, ಮರ, ಬಳ್ಳಿ, ಪೊದೆ, ಹುತ್ತಗಳಿಂದ ಕ್ರಮೇಣ ಮುಚ್ಚಲ್ಪಟ್ಟಿತು.

## ರಾಮಾನುಜರು - ಅವತಾರಕಾರಣ

ವೈಕುಂಠಲೋಕದಲ್ಲಿ ಶ್ರಿಯಃಪತಿಯಾದ ಪರಮಪದನಾಥನು ಆದಿಶೇಷನನ್ನು ಕುರಿತು, "ಎಲೈ ಶೇಷನೇ ಇಲ್ಲಿ ನೀನು ಯಾವರೀತಿ ನನ್ನ ಮನಸ್ಸನ್ನರಿತು ಅದಕ್ಕನುಸಾರವಾಗಿ ಸರ್ವವಿಧ ಸೇವೆಯನ್ನೂ ಮಾಡುವೆಯೋ ಹಾಗೆಯೇ ಸಕಲ ವೇದಾನ್ತಗಳಿಗೂ ನನ್ನ ಇಷ್ಟಾನುಸಾರವಾದ ಅರ್ಥಗಳು ಸ್ಪಷ್ಟವಾಗುವಂತೆಯೂ, ವೇದಾನ್ತಗಳಲ್ಲಿಯೇ ಪರಸ್ಪರ ವಿರೋಧ ಬಾರದಂತೆಯೂ, ಪ್ರತ್ಯಕ್ಷಾದಿ ಪ್ರಮಾಣಾದಿಗಳಿಗೆ ವಿರೋಧವಿಲ್ಲದಂತೆಯೂ, ಶಾಸ್ತ್ರಾರ್ಥಗಳನ್ನು ಗ್ರಂಥಗಳಿಂದಲೂ, ಉಪದೇಶಗಳಿಂದಲೂ ಭೂಲೋಕದಲ್ಲಿ ಪ್ರಚಾರ ಮಾಡು" ಎಂದು ಅಪ್ಪಣೆ ಮಾಡಲು, ಆದಿಶೇಷನು ಭೂಮಿಯಲ್ಲಿ ರಾಮಾನುಜಾಚಾರ್ಯನಾಗಿ ಅವತರಿಸಿದನು.

ರಾಮಾನುಜಾಚಾರ್ಯರು ಭರತಖಂಡದ "ತುಂಡೀರಮಂಡಲ" ಎಂಬ ಭಾಗದಲ್ಲಿ (ಚೆನ್ನೈಗೆ ಸ್ವಲ್ಪ ದೂರದಲ್ಲಿ) "ಶ್ರೀ ಪೆರುಂಬೂದೂರು" ಎಂಬ ಊರಿನಲ್ಲಿ ಸತ್ಕುಲ ಪ್ರಸೂತರಾದ ಕೇಶವ ಸೋಮಯಾಜಿ ಎಂಬವರಿಂದ ಕಾಂತಿಮತೀದೇವಿಯವರ ಗರ್ಭಾಂಬುಧಿಯಲ್ಲಿ ಅವತರಿಸಿದರು. ಇವರು ಅವತರಿಸಿದಾಗಲೇ ಲಕ್ಷ್ಮಣನಿಗೆ ಶ್ರೀರಾಮನಲ್ಲಿ ಭಕ್ತಿಯಿದ್ದಂತೆ ಭಗವಂತನಲ್ಲಿ ಸ್ವಾಭಾವಿಕವಾದ ಮಹಾ ಭಕ್ತಿಯುಳ್ಳವರಾದುದರಿಂದ ಇವರಿಗೆ "ರಾಮಾನುಜ" ಎಂದು ಲಕ್ಷ್ಮಣನ ಹೆಸರೇ ನಾಮಧೇಯವಾಯಿತು. ಇವರು ಕ್ರಮೇಣ ಪ್ರವರ್ಧಮಾನರಾಗಿ, ಉಪನೀತರಾಗಿ, ಸಾಂಗವೇದಾಧ್ಯಯನಾದಿಗಳನ್ನು ಮಾಡಿ, ಗೃಹಸ್ಥಾಶ್ರಮವನ್ನು - ಅಂಗೀಕರಿಸಿ ಅನಂತರ ಕಾಂಚೀಪುರದಲ್ಲಿದ್ದ ಯಾದವಪ್ರಕಾಶರೆಂಬ ಏಕದಂಡ ಸನ್ಯಾಸಿಯಲ್ಲಿ ವೇದಾನ್ತಾರ್ಥಗಳನ್ನು ಕೇಳುವುದಕ್ಕೋಸ್ಕರ ಅಲ್ಲಿಗೆ ಬಂದು ವ್ಯಾಸಂಗಮಾಡುತ್ತಿದ್ದರು.

ಒಂದು ದಿನ ರಾಮಾನುಜಾಚಾರ್ಯರು ಆ ಯಾದವ ಪ್ರಕಾಶರ ತಲೆಗೆ ಎಣ್ಣೆಹಾಕಿ ಒತ್ತುತ್ತಿರುವಾಗ ಅವರು "ಕಪ್ಯಾಸಂ ಪುಂಡರೀಕಂ" ಎಂಬ ಶ್ರುತಿ ವಾಕ್ಯಕ್ಕೆ ಕಪಿಯ ಗುದದ್ವಾರದಂತೆಯೂ, ಕೆಂದಾವರೆಯಂತೆಯೂ ಭಗವಂತನ ಕಣ್ಣುಗಳು ಕೆಂಪಾಗಿವೆ" ಎಂದು ಅರ್ಥವನ್ನು ಹೇಳಲು ರಾಮಾನುಜಾಚಾರ್ಯರು ದುಃಖದಿಂದ ಕಣ್ಣೀರು ಬಿಟ್ಟು, ಏತಕ್ಕೆ ಎಂದು ಅವರು ಕೇಳಿದ್ದಕ್ಕೆ ತಾವು ಅಪ್ಪಣೆಕೊಡಿಸಿದ ಅರ್ಥವು ಹೀನೋಪಮಾದೂಷಿತವಾಗುವುದು. ಹೀಗೆ ಅರ್ಥ ಹೇಳಿದರೆ ಸಮಂಜಸವಾಗುವುದು - "ಆಳವಾದ ನೀರಿನಲ್ಲಿ ಹುಟ್ಟಿ ಅಲ್ಲಿಯೇ ಅದರ ನಾಳದೊಡನೆ ಇದ್ದು ಆಗತಾನೆ ಸೂರ್ಯನ ಕಿರಣಗಳಿಂದ ಅರಳಿಸಲ್ಪಟ್ಟ ಕೆಂದಾವರೆಯ ಹೂವಿನಂತೆ ಆ ಸೂರ್ಯಮಂಡಲ ಮಧ್ಯಸ್ಥನಾದ ನಾರಾಯಣನ ಕಣ್ಣುಗಳಿವೆ" ಎಂದು ಹೇಳಿದರು.

ರಾಮಾನುಜಾಚಾರ್ಯರು ಹೀಗೆ ಶ್ರುತ್ಯರ್ಥವನ್ನು ಹೇಳಿದುದರಿಂದ ಯಾದವ ಪ್ರಕಾಶರಿಗೆ ಅಸೂಯೆಯೂ, ಕೋಪವೂ ಹುಟ್ಟಿ ಈ ರಾಮಾನುಜರನ್ನು ಗಂಗೆಯಲ್ಲಿ ತಳ್ಳಿಕೊಂದುಬಿಡಬೇಕೆಂಬ ಉದ್ದೇಶ ಹುಟ್ಟಿ ಕಾಶೀಯಾತ್ರೆ ಎಂಬ ವ್ಯಾಜದಿಂದ ಶಿಷ್ಯರೊಡನೆ ಇವರನ್ನೂ ಕರೆದುಕೊಂಡು ಹೊರಟರು. ವಿಂಧ್ಯಪರ್ವತದ ಅರಣ್ಯದಲ್ಲಿ ಹೋಗುತ್ತಿರುವಾಗ ಈ ರಾಮಾನುಜಾಚಾರ್ಯರ ಚಿಕ್ಕತಾಯಿ (ತಾಯಿಯ ತಂಗಿ)ಯ ಮಗನಾದ ಗೋವಿಂದಾಚಾರ್ಯರೆಂಬುವರು ಯಾವುದೋ ವ್ಯಾಜದಿಂದ ಸ್ವಲ್ಪ ಹಿಂದೆ ಇವರನ್ನು ನಿಲ್ಲಿಸಿಕೊಂಡು ಈ ವಿಚಾರವನ್ನು ರಾಮಾನುಜರಿಗೆ ಹೇಳಿ ಹಿಂದಕ್ಕೆ ಕಳುಹಿಸಿಬಿಟ್ಟು ತಾವು ಮುಂದೆ ಗುರುಶಿಷ್ಯರುಗಳೊಡನೆ ಕಾಶಿಗೆ ಹೊರಟುಹೋದರು. ಸ್ವಲ್ಪದೂರ ಹೋದ ಮೇಲೆ ರಾಮಾನುಜರನ್ನು ಕಾಣದೆ "ಈ ಘೋರಾರಣ್ಯದಲ್ಲಿ ಎಲ್ಲೋ ಮೃತಪಟ್ಟಿರಬಹುದು" ಎಂದು ಊಹಿಸಿ ಅವರೆಲ್ಲರೂ ಕಾಶಿಗೆ ಹೊರಟುಹೋದರು. ಹಿಂದಿರುಗಿ ಬಂದ ರಾಮಾನುಜಾಚಾರ್ಯರು ನಿರ್ಮಾನುಷವಾಗಿಯೂ, ದುಷ್ಟಮೃಗಭರಿತವಾಗಿಯೂ, ದುರ್ಗಮವಾಗಿಯೂ ಇರುವ ಆ ವಿಂಧ್ಯಾರಣ್ಯದಲ್ಲಿ ದಾರಿ ಕಾಣದೆ ಶ್ರಮ, ಹಸಿವು ಬಾಯಾರಿಕೆಗಳಿಂದ ಪೀಡಿತರಾದರು. ಸಾಯಂಕಾಲವೂ ಆಗಿ ಕತ್ತಲೆಯಾಗುತ್ತಾ ಬರಲು, ಅಲ್ಲಿಗೆ ಅಕಸ್ಮಾತ್ತಾಗಿ ವ್ಯಾಧ ದಂಪತಿಯರು ಬಂದು, "ಬಹಳ ಬಾಯಾರಿಕೆಯಾಗುತ್ತಿದೆ, ಕುಡಿಯುವುದಕ್ಕೆ ಸ್ವಲ್ಪ ನೀರನ್ನು ತಂದುಕೊಡಿ" ಎಂದು ರಾಮಾನುಜಾಚಾರ್ಯರನ್ನು ಕೇಳಲು, ಒಂದು ಅಡಿ ಇಡುವ

ದಕ್ಕೂ ಕತ್ತಲೆಯು ಅವಕಾಶ ಕೊಡದೇ ಇದ್ದುದರಿಂದ ಬಹಳ ಪಶ್ಚಾತ್ತಾಪಪಡುತ್ತಾ ಒಂದು ಮರದ ಕೆಳಗೆ ಮಲಗಿಕೊಂಡರು. ಆ ದಂಪತಿಗಳೂ ಇವರ ಜೊತೆಯಲ್ಲೇ ಮಲಗಿಕೊಂಡರು.

"ಬಾಯಾರಿಕೆಯಾಗುತ್ತಿದೆ ನೀರು ಬೇಕು" ಎಂದು ಕೇಳಿದ ಅವರಿಬ್ಬರಿಗೂ ನೀರು ತಂದುಕೊಡಬೇಕೆಂಬ ಉದ್ದೇಶದಿಂದ ಇವರು ಉಷಃಕಾಲದಲ್ಲಿ ಎದ್ದು ನೋಡಿ ಅವರನ್ನು ಕಾಣದೆ ಹುಡುಕುತ್ತಾ, ಮಾರ್ಗವೂ ದಿಕ್ಕೂ ತೋಚದೆ ಹಾಗೆಯೇ ಕೊಂಚ ದೂರ ಹೋದರು. ಅಲ್ಲಿ ಬರುತ್ತಿದ್ದ ಕೆಲವರನ್ನು "ಇದು ಯಾವ ಸ್ಥಲ" ಎಂದು ಕೇಳಲು, ಅವರು "ಇದೇನು ಬ್ರಾಹ್ಮಣಾ? ವೇಗವತೀನದಿಯನ್ನೂ, ಅದರ ತೀರದಲ್ಲಿ ಕಾಂಚೀಪುರವನ್ನೂ, ಅದರಲ್ಲಿ ಪುಣ್ಯಕೋಟಿ ವಿಮಾನವನ್ನೂ, ಅದರ ಸಮೀಪದಲ್ಲಿ 'ಶಾಲಕ್ಕಿಣರು' ಎಂಬ ಬಾವಿಯನ್ನೂ ಕಾಣೆಯಾ? ಇವೆಲ್ಲವೂ ಯಾರಿಗೆ ತಾನೆ ತಿಳಿಯದು? ನೀನು ಯಾವದೇಶ?" ಎಂದು ಕೇಳಿದರು.

ಅಲ್ಲಿ ಬಂದ ಜನಗಳು ಹೇಳಿದ ಈ ಮಾತನ್ನು ಕೇಳಿ, ರಾಮಾನುಜಾಚಾರ್ಯರು "ವಿಂಧ್ಯಪರ್ವತವೆಲ್ಲಿ? ಕಾಂಚೀಪುರವೆಲ್ಲಿ? ಎಷ್ಟು ಸಾವಿರ ಮೈಲಿಗಳ ದೂರ? ರಾತ್ರಿ ವಿಂಧ್ಯಾರಣ್ಯದಲ್ಲಿ ಮಲಗಿದ್ದೆನಲ್ಲಾ! ಎದ್ದು ನೋಡಿದರೆ "ಇದು ಕಾಂಚೀಪುರ" ಎಂದು ಹೇಳುತ್ತಾರಲ್ಲವೇ? ಇದೇನು ಆಶ್ಚರ್ಯ! ಎಷ್ಟು ಬೇಗ ಎದ್ದು ನೋಡಿದರೂ ಆ ಬೇಡರ ದಂಪತಿಗಳು ಕಣ್ಣಿಗೆ ಕಾಣಿಸಲಿಲ್ಲ. ಈ ವಿಚಿತ್ರವನ್ನು ನೋಡಿದರೆ ಅವರಿಬ್ಬರೂ ವರದರಾಜದೇವರೂ ಅವರ ಮಹಿಷಿಯಾದ ಪೆರುಂದೇವಿ ಅಮ್ಮನವರೂ ಆಗಿರಬೇಕು. ಅವರೇ ನನ್ನನ್ನು ತಮ್ಮ ಯೋಗಮಾಯೆಯಿಂದ ಮಲಗಿದ್ದಾಗ ತಿಳಿಯದ ಹಾಗೆ ಎತ್ತಿಕೊಂಡು ತಂದುಬಿಟ್ಟಿದ್ದಾರೆ. ಅವರು ಬಾಯಾರಿಕೆ ಎಂದು ಹೇಳಿದರಲ್ಲ. ಅವರಿಗೆ ಸ್ವಲ್ಪ ನೀರು ಕೊಡುವುದಕ್ಕೂ ನನಗೆ ಯೋಗ್ಯತೆ ಇಲ್ಲದೆ ಹೋಯಿತಲ್ಲ. ಆ ದಿವ್ಯದಂಪತಿಗಳ ನಿರ್ಹೇತುಕವಾದ ದಯೆಯು ನನ್ನಲ್ಲಿ ಎಷ್ಟೆಂದು ಹೇಳಬಹುದು" ಎಂದು ಇದೇ ಮೊದಲಾದುದನ್ನು ಭಾವಿಸುತ್ತಾ ಈ ರಾಮಾನುಜಾಚಾರ್ಯರು ಅಂದಿನಿಂದ ಪ್ರತಿನಿತ್ಯವೂ "ಶಾಲಕ್ಕಿಣ ರ್" ಎಂಬ ಬಾವಿಯಿಂದ ಅಗ್ರೋದಕವನ್ನು ತಂದು ವರದರಾಜರಿಗೂ ಪೆರುಂದೇವಿಗೂ ಸಮರ್ಪಿಸುತ್ತಿದ್ದರು.

ಕಾಶೀಯಾತ್ರೆಗೆ ಹೋಗಿದ್ದ ಯಾದವಪ್ರಕಾಶರು ಶಿಷ್ಯರೊಡನೆ ಹಿಂತಿರುಗಿ ಬಂದು ತನ್ನ ಇಷ್ಟಾರ್ಥವು ನಡೆಯದೇ ಹೋದುದನ್ನು ಪ್ರಕಟಮಾಡದೇ ಇರಲು, ರಾಮಾನುಜಾಚಾರ್ಯರು ಪೂರ್ವದಂತೆಯೇ ಅವರಲ್ಲಿ ಹೋಗುತ್ತಿದ್ದರು. ಆಗ ಆ ದೇಶದ ರಾಜನ ಮಗಳಿಗೆ ಬ್ರಹ್ಮರಾಕ್ಷಸನು ಹಿಡಿದು ಯಾವ ವಿಧವಾದ ಚಿಕಿತ್ಸೆಗೂ ನಿವೃತ್ತಿಯಾಗದೇ ಇರಲು, ಈ ಯಾದವಪ್ರಕಾಶರು ಮಂತ್ರಸಿದ್ಧರೆಂತಲೂ, ಅವರಿಂದ ಇದಕ್ಕೆ ನಿವೃತ್ತಿಯಾಗುತ್ತೆಂತಲೂ ರಾಜನು ಕೇಳಿ ಅವರನ್ನು ಕರೆಯಿಸಲು ಅವರು ಶಿಷ್ಯರೊಡನೆ ಅಲ್ಲಿಗೆ ಬರಲು, ಆ ಯಾದವಪ್ರಕಾಶರಿಗೂ ಈ ಬ್ರಹ್ಮರಕ್ಷಸ್ಸಿಗೂ ಹೀಗೆ ಸಂವಾದ ನಡೆಯಿತು - "ಎಲೈ ಬ್ರಹ್ಮರಕ್ಷಸ್ಸೇ, ಮಂತ್ರಸಿದ್ಧರಾದ ಯಾದವಪ್ರಕಾಶರನ್ನು ಕೇಳಿ ಬಲ್ಲೆಯಾ? ಅವರು ಹೇಳುತ್ತಾರೆ. ಈ ರಾಜಪುತ್ರಿಯನ್ನು ಬಿಟ್ಟುಹೋಗು", "ಎಲೈ ಸನ್ಯಾಸಿಯೇ ನಾನು ಹೇಳುತ್ತೇನೆ. ನೀವೇ ಏತಕ್ಕೆ ಇಲ್ಲಿಂದ ಹೊರಟು ಹೋಗಬಾರದು?", ಎಲೈ ಬುದ್ಧಿಹೀನನಾದ ಬ್ರಹ್ಮರಾಕ್ಷಸನೇ ನನ್ನ ಮಂತ್ರಬಲದಿಂದ ಹತನಾಗಿ ಬೀಳುವಿ" "ಓಹೋ! ನಿನ್ನ ಮಂತ್ರವನ್ನು ನಾನು ಬಲ್ಲೆ. ಹೇಳಲೇ ಕೇಳು. ಆದರೆ ನಿನ್ನನ್ನು ಮಂತ್ರಸಿದ್ಧನೆಂದು ಹೇಳಿಕೊಳ್ಳುತ್ತೀಯಷ್ಟೆ. ಇದಕ್ಕೆ ಹಿಂದಿನ ಜನ್ಮದಲ್ಲಿ ನೀನೂ ನಾನೂ ಏನಾಗಿದ್ದೆವು ಅದನ್ನು ಹೇಳುವೆಯಾ?", "ನನಗೆ ತಿಳಿಯದು ನೀನು ಹೇಳುವೆಯಾ?", "ಆಹಾ! ಹೇಳುವೆನು ಕೇಳು. ನೀನು ಮಧುರಾಂತಕನೆಂಬ ಊರಿನ ಕೆರೆಯ ಹತ್ತಿರ ಒಂದು ಹುತ್ತದಲ್ಲಿ ಸರ್ಪವಾಗಿದ್ದೆ. ನಾನು ಯಾವಾಗಲೂ ಯಜ್ಞದೀಕ್ಷಿತನಾದ ಬ್ರಾಹ್ಮಣನಾಗಿದ್ದೆನು", "ಆದರೆ ನಮ್ಮಿಬ್ಬರಿಗೂ ಈ ಜನ್ಮಗಳು ಯಾತರಿಂದ ಬಂದವು ಹೇಳುವೆಯಾ?", "ಎಲೈ ಸನ್ಯಾಸಿಯೇ ಕೇಳು ನೀನು ಸರ್ಪವಾಗಿದ್ದಾಗ ಆ ಕೆರೆಯಲ್ಲಿ ಕೆಲವರು ಭಗವದ್ಭಕ್ತರು ಸ್ನಾನಾದಿಗಳನ್ನು ಮಾಡಿ ಪ್ರಸಾದ ಸ್ವೀಕಾರ ಮಾಡಿ ಶೇಷಪ್ರಸಾದವನ್ನು ಬಿಸಾಡಿದ್ದರು. ಅದನ್ನು ನೀನು ತಿಂದೆಯಾದ್ದರಿಂದ ನಿನಗೆ ಬ್ರಾಹ್ಮಣ ಜನ್ಮ ಬಂತು. ಯಜ್ಞಮಾಡುವಾಗ ಮಂತ್ರಲೋಪ, ಕ್ರಿಯಾಲೋಪ, ದ್ರವ್ಯಲೋಪಗಳುಂಟಾದುದರಿಂದ ನನಗೆ ಈ ಬ್ರಹ್ಮರಾಕ್ಷಸ ಜನ್ಮವುಂಟಾಯಿತು", "ಎಲೈ ರಕ್ಷಸ್ಸೇ ನೀನಿಷ್ಟು ತಿಳಿದೂ ಕ್ರೂರವಾದ ಈ ಸ್ತ್ರೀ ಹಿಂಸೆಯನ್ನು ಏತಕ್ಕೆ ಮಾಡುವಿ? ಬಿಡು", "ಓಹೋ! ನಿನ್ನ ಮಾತಿನಿಂದ ಹೋಗುವೆನೆ?", "ಆದರೆ ಇನ್ನೇತರಿಂದ ಹೋಗುವೆ?", "ಸಕಲ ಕಲ್ಯಾಣಗುಣಪೂರ್ಣರಾಗಿ ಅಂಶಪುರುಷರಾದ ಈ ರಾಮಾನುಜಾಚಾರ್ಯರ ಅಪ್ಪಣೆಯಿಂದ" ಎಂದಿತು (ಸಂವಾದ)

ಅನಂತರ ಯಾದವಪ್ರಕಾಶರು, "ಹಾಗಾದರೆ ಎಲೈ ರಾಮಾನುಜರೇ ಈ ಬ್ರಹ್ಮರಕ್ಷಸ್ಸಿಗೆ ಬಿಟ್ಟು ಹೋಗುವಂತೆ ನೀವು ಅಪ್ಪಣೆಕೊಡಿಸಿ" ಎಂದು ಹೇಳಲು, ರಾಮಾನುಜಾಚಾರ್ಯರು, "ಎಲೈ - ಬ್ರಹ್ಮರಾಕ್ಷಸನೇ ದೊಡ್ಡವರ ಅಪ್ಪಣೆ ಪ್ರಕಾರ ಈ ರಾಜಪುತ್ರಿಯನ್ನು ಬಿಟ್ಟು ಹೊರಟುಹೋಗು" ಎಂದು ಅಪ್ಪಣೆ ಮಾಡಲು, ಆ ಬ್ರಹ್ಮರಕ್ಷಸ್ಸು ಆ ಗೋಷ್ಠೀಮಧ್ಯದಲ್ಲಿದ್ದ ರಾಮಾನುಜಾಚಾರ್ಯರ ಪಾದಾರವಿಂದಗಳನ್ನು ತನ್ನ ತಲೆಯಮೇಲೆ ಇಟ್ಟುಕೊಂಡು ಆ ರಾಜಪುತ್ರಿಯನ್ನು ಬಿಟ್ಟು, ತಾನು ಬಿಟ್ಟು ಹೋದುದಕ್ಕೆ ಗುರುತಾಗಿ ಅಲ್ಲಿದ್ದ ಅರಳೀಮರದ ದೊಡ್ಡ ಕೊಂಬೆಯನ್ನು ಮುರಿದು ಹಾಕಿ ಹೊರಟುಹೋಯಿತು. ಇದೆಲ್ಲವನ್ನೂ ಆ ಮೂಲಾಗ್ರವಾಗಿ ನೋಡುತ್ತಿದ್ದ ದೊರೆಯೂ ಆ ಯಾದವಪ್ರಕಾಶರೂ ಅಲ್ಲಿದ್ದ ಜನಗಳೂ ಅತ್ಯಾಶ್ಚರ್ಯಪಟ್ಟು ರಾಮಾನುಜಾಚಾರ್ಯರು "ಅಂಶಪುರುಷರು" ಎಂದು ತಿಳಿದುಕೊಂಡರು.

ರಾಮಾನುಜಾಚಾರ್ಯರು "ಕಪ್ಯಾಸಂ", "ಸತ್ಯಂ ಜ್ಞಾನಂ" ಇತ್ಯಾದಿ ಶ್ರುತ್ಯರ್ಥವನ್ನು ಹೇಳಿದ ವೃತ್ತಾಂತವನ್ನು ಶ್ರೀರಂಗದಲ್ಲಿ ದಯಮಾಡಿಸಿದ್ದ ಯಾಮುನಾಚಾರ್ಯರು ಕೇಳಿ ಆ ರಾಮಾನುಜಾರ್ಯರನ್ನು ವಿಶಿಷ್ಟಾದ್ವೈತ ಪ್ರವರ್ತಕರನ್ನಾಗಿ ಮಾಡಬೇಕೆಂದು ಉದ್ದೇಶಿಸಿ, ಶ್ರೀರಂಗದಿಂದ ಕಾಂಚೀಪುರಕ್ಕೆ ದಯಮಾಡಿಸಿ ವರದರಾಜರ ದೇವಸ್ಥಾನದಲ್ಲಿ ತಮ್ಮ ಕೆಲವು ಶಿಷ್ಯರೊಡನೆ ಕುಳಿತುಕೊಂಡಿದ್ದರು. ಆಗ ಯಾದವ ಪ್ರಕಾಶರೂ ಅವರ ಶಿಷ್ಯರೊಡನೆ ರಾಮಾನುಜಾಚಾರ್ಯರೂ ಬರುವುದನ್ನು ನೋಡಿ, ರಾಮಾನುಜಾಚಾರ್ಯರಿಗೆ ಪ್ರತ್ಯೇಕವಾಗಿ ಹೇಳುವುದಕ್ಕೆ ಅವಕಾಶವಾಗದೆ ಇದ್ದುದರಿಂದ, "ಇವರು ವಿಶಿಷ್ಟಾದ್ವೈತ ದರ್ಶನ ಸ್ಥಾಪಕಾಚಾರ್ಯರಾಗಲಿ" ಎಂದು ಅವರನ್ನು ಕಟಾಕ್ಷಿಸಿ ಅನುಗ್ರಹಿಸಿ ಪುನಃ ಶ್ರೀರಂಗಕ್ಕೆ ಹೊರಟುಹೋದರು. ಆದರೂ ಅದೇ ಚಿಂತೆಯಲ್ಲಿದ್ದುದರಿಂದಲೂ, ತಮಗೆ ಶರೀರದಲ್ಲಿ ಅಸ್ವಾಸ್ಥ್ಯ ಉಂಟಾದುದರಿಂದಲೂ, ರಾಮಾನುಜಾಚಾರ್ಯರನ್ನು ಹೇಗಾದರೂ ಮಾಡಿ ಶ್ರೀರಂಗಕ್ಕೆ ಕರೆದುಕೊಂಡು ಬರುವುದಕ್ಕೋಸ್ಕರ ತಮ್ಮ ಶಿಷ್ಯರಾದ "ಪೆರಿಯನಂಬಿ" ಎಂಬುವರನ್ನು ಕಾಂಚೀಪುರಕ್ಕೆ ಕಳುಹಿಸಲು, ಅವರು ಬಂದು ರಾಮಾನುಜಾಚಾರ್ಯರಿಗೆ ಕ್ರಮವಾಗಿ ಬೋಧಿಸಿ ಕರೆದುಕೊಂಡು ಶ್ರೀರಂಗಕ್ಕೆ ಹೋಗಲು ಕಾವೇರಿಯ ಈಚೆಯ ದಡದಲ್ಲಿರುವಾಗಲೇ ಆಚೆಯ ದಡದಲ್ಲಿ ಜನಗಳ ಗುಂಪನ್ನು ನೋಡಿ, "ಇದೇನು ಗುಂಪು" ಎಂದು ವಿಚಾರಿಸಲು, "ಆಳವಂದಾರ್‌ರವರು ಪರಂಧಾಮ ಹೊಂದಿದರು" ಎಂದು ಕೇಳಿ ಬಹಳ ದುಃಖದಿಂದ ಹಿಂದಿರುಗುವ ಪ್ರಯತ್ನಮಾಡಿ, ಕೊನೆಗೆ ಅವರ ಚರಮವಿಗ್ರಹವನ್ನಾದರೂ ದರ್ಶನ ಮಾಡಬೇಕೆಂಬ ಕುತೂಹಲದಿಂದ ಕಾವೇರಿಯನ್ನು ದಾಟಿ ಅಲ್ಲಿ ಬೃಂದಾವನಕ್ಕಾಗಿ ಭೂಮಿಯೊಳಗೆ ಬಿಜಯಮಾಡಿಸಿದ್ದ ಆಳವಂದಾರ್‌ರವರ ಚರಮವಿಗ್ರಹವನ್ನು ರಾಮಾನು

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ - ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ - ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ - ತಿರುಪತಿ - 517 502.

ಜಾಚಾರ್ಯರು ದರ್ಶನ ಮಾಡಿದಾಗ ಅವರ ಕೈ ಬೆರಳುಗಳು ಮೂರು ಮಾತ್ರ ಮಡಿಸಿಕೊಂಡಿದ್ದು ದನ್ನು ನೋಡಿ, ಅಲ್ಲಿದ್ದವರನ್ನು ಕೇಳಿದಾಗ ರಾಮಾನುಜಾಚಾರ್ಯರಿಗೂ ಅವರಿಗೂ ಮುಂದೆ ಹೇಳುವಂತೆ ಸಂಭಾಷಣೆ ನಡೆಯಿತು.

"ಇವರಿಗೆ ಯಾವಾಗಲೂ ಮೂರು ಬೆರಳುಗಳು ಬಗ್ಗಿಯೇ ಇದ್ದವೋ?", "ಇಲ್ಲ, ಈಗ ಹೀಗೆ ಇವೆ.", "ಹಾಗಾದರೆ ಪೂರ್ವದಲ್ಲಿ ಇವರು ಗ್ರಂಥಪ್ರವಚನಾದಿ ಕಾಲಗಳಲ್ಲಿ ಮಾತು ಬಂದಾಗ ತಮಗೆ ಇಷ್ಟವಾದುದನ್ನು ನಿರ್ಮೊಹನೆ ಪದೇ ಪದೇ ಏನಾದರೂ ಹೇಳುತ್ತಿದ್ದರೋ?", "ಹೌದು ಉಂಟು. ಬ್ರಹ್ಮ ಸೂತ್ರ, ಮಹಾಭಾರತಗಳಿಂದ ನಮ್ಮ ದರ್ಶನಕ್ಕೆ ಸಹಾಯ ಮಾಡಿದ ವ್ಯಾಸಮಹರ್ಷಿಯಲ್ಲಿಯೂ, ತತ್ತ್ವತ್ರಯಗಳನ್ನು ವಿಶದವಾಗಿ ತಿಳಿಯುವಂತೆ ವಿಷ್ಣು ಪುರಾಣವನ್ನು ರಚಿಸಿದ ಪರಾಶರ ಮಹರ್ಷಿಯಲ್ಲಿಯೂ, ಕೃತಜ್ಞತೆಯನ್ನು ತೋರಿಸಬೇಕೆಂತಲೂ, ಭಗವನ್ನಿರ್ಹೇತುಕ ಕಟಾಕ್ಷದಿಂದ ಭಗವತ್ಸ್ವರೂಪ ರೂಪಗುಣ ವಿಗ್ರಹ ವಿಭೂತಿಗಳನ್ನೆಲ್ಲಾ ಸಾಕ್ಷಾತ್ಕರಿಸಿ ಆ ಅನುಭವ ಪರೀವಾಹರೂಪವಾದ ದಿವ್ಯ ಪ್ರಬಂಧಗಳಿಂದ ಪರೋಪಕಾರವನ್ನು ಮಾಡಿದ ನಮ್ಮಾಳ್ವಾರರಲ್ಲಿ ಕೃತಜ್ಞತೆಯನ್ನು ತೋರಿಸಬೇಕೆಂತಲೂ, ಹಾಗೆಯೇ ನಮ್ಮಾಳ್ವಾರರವರ ಸಂಪ್ರದಾಯದಂತೆ ಬ್ರಹ್ಮಸೂತ್ರಕ್ಕೆ ವಿಶಿಷ್ಟಾದ್ವೈತ ಪರವಾಗಿ ಒಂದು ಭಾಷ್ಯ ಮಾಡಬೇಕೆಂದೂ, ಈ ಮೂರು ಮಾತುಗಳನ್ನು ಪದೇ ಪದೇ ಅಪ್ಪಣೆ ಕೊಡಿಸುತ್ತಿದ್ದರು" ಎಂದರು. (ಸಂವಾದ) ಅನಂತರ ರಾಮಾನುಜಾಚಾರ್ಯರು ಅವರ ಈ ಮಾತುಗಳನ್ನು ಕೇಳಿ, "ಅತ್ಯಂತ ನಶ್ವರವಾದ ಈ ಜೀವಮಾನವು ನನಗೂ ಇದ್ದರೆ ದೈವಾನುಕೂಲ್ಯವೂ ಉಂಟಾದರೆ ನಾನು ಈ ಮೂರು ಕೊರತೆಗಳನ್ನೂ ಪರಿಹರಿಸುವೆನು" ಎಂದು ಗಂಟಾಘೋಷವಾಗಿ ಹೇಳಲು ಎಲ್ಲರೂ ನೋಡುತ್ತಿದ್ದಂತೆಯೇ ಆ ಮೂರು ಬೆರಳುಗಳೂ ನೆಟ್ಟಗಾಗಿ ಪ್ರಕಾಶಿಸಿದವು. ಇದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟು "ಇವರು ಮಹಾನುಭಾವರು" ಎಂದು ತಿಳಿದರು.

### ತಿರುಕ್ಕಚ್ಚಿ ನಂಬಿಗಳ ಉಪದೇಶ

ಚತುರ್ಮುಖಬ್ರಹ್ಮನ ಯಜ್ಞದ ಅಗ್ನಿಕುಂಡದಲ್ಲಿ ಅವತರಿಸಿದ ವರದರಾಜ ದೇವರಿಗೆ ತಾಪಪರಿಹಾರಾರ್ಥವಾಗಿ ಸರ್ವದಾ ಬೀಸಣಿಗೆ ಕೈಂಕರ್ಯವನ್ನು ಮಾಡುತ್ತಲೂ, ಅವರಿಗೆ ಹಾಗೆ ಇಷ್ಟವಾದ ಅಂತರಂಗ ಕೈಂಕರ್ಯವನ್ನು ಮಾಡುವುದರಿಂದಲೇ ಯಾವ ತಿರುಕ್ಕಚ್ಚಿನಂಬಿಯೂ, ವರದರಾಜ ದೇವರೂ ಪರಸ್ಪರ ಸ್ನೇಹಿತರಂತೆ ಮಾತನಾಡುವರೋ ಅಂಥಾ ತಿರುಕ್ಕಚ್ಚಿ ನಂಬಿಗಳನ್ನು ಆಶ್ರಯಿಸಿ ಈ ರಾಮಾನುಜಾಚಾರ್ಯರು "ಆಚಾರ್ಯರೇ ನಾನು ಯಾವುದೋ ಕೆಲವು ಅರ್ಥಗಳನ್ನು ತಿಳಿದುಕೊಂಡಿದ್ದೇನೆ. ಆ ಅರ್ಥಗಳು ಇಂಥವುಗಳು ಎಂಬುದನ್ನೂ ಅವು ಸರಿಯಾದ, ಅರ್ಥಗಳೋ ಅಲ್ಲವೋ? ಎಂಬುದನ್ನೂ ತಾವು ವರದರಾಜನನ್ನು ಕೇಳಿ ನನಗೆ ಅಪ್ಪಣೆ ಕೊಡಿಸಬೇಕೆಂದು ವಿನಯದಿಂದ ಕೇಳಿದರು.

ತಿರುಕ್ಕಚ್ಚಿನಂಬಿಯೂ ಕೂಡ ಆ ದಿವಸ ರಾತ್ರಿ ವರದರಾಜರಿಗೆ ಬೀಸಣಿಗೆ ಕೈಂಕರ್ಯವನ್ನು ಮಾಡಿ ದೇವರು ಮಲಗುವ ಸಮಯದಲ್ಲಿ "ರಾಮಾನುಜಾಚಾರ್ಯರು ಯಾವುದೋ ಕೆಲವು ಅರ್ಥಗಳನ್ನು ಭಾವಿಸಿದ್ದಾರಂತೆ. ಅವು ಯಾವುವು? ಅವು ನಿಮಗೆ ಸಮ್ಮತವಾದವುಗಳೇ?" ಎಂದು ಕೇಳಿದರು. ಅದಕ್ಕೆ ವರದರಾಜರು,"ರಾಮಾನುಜರ ಮನಸ್ಸಿನಲ್ಲಿ ಆರು ಅರ್ಥಗಳಿವೆ. ಅವು ಇಂಥವುಗಳು. ಅವುಗಳು ನನಗೆ ಅತ್ಯಂತ ಸಮ್ಮತವಾದವುಗಳು. ಅವೇ ಶಾಸ್ತ್ರಸಾರಾರ್ಥಗಳು" ಎಂದು ಹೇಳಿದರು ತಿರುಕ್ಕಚ್ಚಿನಂಬಿಯು ಅದನ್ನು ತಿಳಿದುಕೊಂಡು ಬೆಳಿಗ್ಗೆ ರಾಮಾನುಜಾಚಾರ್ಯರೊಡನೆ ಹೇಳಿದ್ದೇನೆಂದರೆ - "ಎಲೈ ರಾಮಾನುಜರೇ ನಿಮ್ಮ ಮನಸ್ಸಿನಲ್ಲಿ ಆರು ಅರ್ಥಗಳಿವೆ ಅವು ಭಗವತ್ಸಮ್ಮತವಾದ ಶಾಸ್ತ್ರಾರ್ಥಗಳು. ಈಗ ನಾನು ಹೇಳುವ ಅರ್ಥಗಳೂ, ನಿಮ್ಮ ಮನಸ್ಸಿನಲ್ಲಿರುವ ಅರ್ಥಗಳೂ, ಒಂದೇ ಆಗುವುದೇ?

ಹೋಡಿ ಹೇಳಿ - ಆ ಆರು ಅರ್ಥಗಳು ಯಾವುವೆಂದರೆ - (೧) ನಾರಾಯಣನೇ ಪರತತ್ತ್ವ, (೨) ಭೇದವೇ ಶಾಸ್ತ್ರಾರ್ಥ, (೩) ಭಗವತ್ಪ್ರಾಪ್ತಿಗೆ ಭಗವತ್ಪ್ರಪತ್ತಿಯೇ ಉಪಾಯ, (೪) ಇಂತಹ ಪ್ರಪನ್ನನಿಗೆ ಸಾಯುವ ಕಾಲದಲ್ಲಿ ಭಗವಂತನ ಸ್ಮರಣೆ ಬೇಕಾದುದಿಲ್ಲ, (೫) ಪ್ರಪನ್ನನಿಗೆ ಉಪಾಸಕನಂತೆ ಪ್ರಾರಬ್ಧಕರ್ಮಫಲವಾದ ಮತ್ತೆ ಕೆಲವು ಶರೀರಗಳು ಬರುವುದಿಲ್ಲ. ಇದೇ ಕೊನೆಯ ಶರೀರ, (೬) ಪೆರಿಯ ನಂಬಿ ತಿರುವಡಿಗಳಲ್ಲಿ ಆಶ್ರಯಿಸತಕ್ಕದ್ದು" ಎಂದು ಹೇಳಿದರು.

ಅನಂತರ ರಾಮಾನುಜಾಚಾರ್ಯರು ಈ ಮಾತುಗಳನ್ನು ಕೇಳಿ ಇದರಿಂದ ಭಗವಂತನ ಆಶ್ರಿತ ಸುಲಭತ್ವವನ್ನೂ, ಸರ್ವಜ್ಞತ್ವವನ್ನೂ, ತನ್ನಲ್ಲಿ ನಿಜವಾದ ಪರಮಕೃಪೆಯನ್ನೂ, ಅಂತಹ ಸರ್ವಜ್ಞನಾದ ಸರ್ವೇಶ್ವರನನ್ನೂ ತನ್ನ ಕೈವಶಮಾಡಿಕೊಂಡಿರುವ ಆಚಾರ್ಯನ ಗೌರವಾತಿಶಯವನ್ನೂ ಭಾವಿಸಿ ನೋಡಿ ಬಹಳ ಸಂತೋಷಪಡುತ್ತಾ ತನ್ನ ಕರುಣೆಯಿಂದ ಲೋಕವನ್ನು ಉಜ್ಜೀವಿಸುವಂತೆ ಮಾಡುವುದಕ್ಕಾಗಿ ಶ್ರುತ್ಯರ್ಥಗಳೆಲ್ಲವನ್ನೂ ಭಾವಿಸುತ್ತಿದ್ದರು.

## ರಾಮಾನುಜಾಚಾರ್ಯರ ಸನ್ಯಾಸಾಶ್ರಮ

ಹೀಗೆ ತಿರುಕ್ಕಚ್ಚಿನಂಬಿಯವರ ಶಾಂತ್ಯಾದಿ ಗುಣಗಳೇನು, ನಿರಂತರ ಭಗವತ್ಕೈಂಕರ್ಯವೇನು, ಭಗವಂತನನ್ನು ಸ್ವಾಧೀನಪಡಿಸಿಕೊಂಡಿರೋಣವೇನು, - ಇವೇ ಮೊದಲಾದ ಅತಿಶಯಗಳನ್ನು ನೋಡಿ, ರಾಮಾನುಜಾಚಾರ್ಯರು ಅವರ ಭೋಜನ ಪಾತ್ರದಲ್ಲಿ ಭುಕ್ತಶೇಷವಾದ ಪ್ರಸಾದವನ್ನು ಸ್ವೀಕರಿಸಬೇಕೆಂದು ಬಹಳ ದಿವಸದಿಂದ ನಿರೀಕ್ಷಣೆ ಮಾಡುತ್ತಿದ್ದು; ಹಿಂದಿನ ದಿನ ಮೊದಲೇ ಪ್ರಾರ್ಥಿಸಿದ್ದು ಮಧ್ಯಾಹ್ನದಲ್ಲಿ ತಿರುಕ್ಕಚ್ಚಿನಂಬಿಯವರನ್ನು ಮನೆಗೆ ಊಟಕ್ಕೆ ಕರೆದುಕೊಂಡು ಬರುವುದಕ್ಕೋಸ್ಕರ ಇವರೊಂದು ಬೀದಿಯಿಂದ ಹೋಗಲು, ಅವರೊಂದು ಬೀದಿಯಿಂದ ಬಂದು ಊಟಮಾಡಿಬಿಟ್ಟು ಹೊರಟುಹೋದರು. ರಾಮಾನುಜಾಚಾರ್ಯರು ಮನೆಗೆ ಬರುವಷ್ಟರೊಳಗೆ ಇವರ ಹೆಂಡತಿಯು ಅವರು ಊಟಮಾಡಿದ ಎಲೆಯನ್ನು ಕೋಲಿನಿಂದ ಚುಚ್ಚಿ ದೂರದಲ್ಲಿ ಹಾಕುವಾಗ ಎಂಜಲು ಹಾರಿತೆಂದು ಸ್ನಾನಮಾಡಿ ಕುಳಿತಿದ್ದಳು. ಇನ್ನೊಂದು ದಿವಸ ಮನೆಗೆ ಬಂದ ಇಬ್ಬರು ಶ್ರೀವೈಷ್ಣವರಿಗೆ ಬಹಳ ಹಸಿವಾಗಿರಲು, ರಾಮಾನುಜಾಚಾರ್ಯರು ಅವರಿಗೆ ಆ ದೇಶಾಚಾರದಂತೆ ತಂಗಳನ್ನವನ್ನು ಕೊಡುವಂತೆ ತಮ್ಮ ಹೆಂಡತಿಗೆ ಹೇಳಿದಾಗ ಅವಳು ಇಲ್ಲವೆಂದು ಹೇಳಿದಮೇಲೆ ತಾವೇ ಹೋಗಿ ನೋಡಿದಾಗ ಒಳಗೆ ಪರ್ಯುಷಿತಾನ್ನವಿತ್ತು ಅದನ್ನು ಅವರಿಗೆ ಕೊಟ್ಟುಬಿಟ್ಟರು ಮತ್ತೊಂದು ದಿವಸ ಈ ರಾಮಾನುಜಾಚಾರ್ಯಗೆ ಪಂಚ ಸಂಸ್ಕಾರಮಾಡಿಯೂ, ಇವರಿಗೆ ರಹಸ್ಯಾರ್ಥಗಳನ್ನು ಉಪದೇಶ ಮಾಡುವುದಕ್ಕೋಸ್ಕರ ಇವರ ಮನೆಯಲ್ಲೇ ಒಂದು ಕಡೆ ವಾಸವಾಗಿದ್ದ "ಪೆರಿಯನಂಬಿ" ಎಂಬ ಆಚಾರ್ಯರ ಹೆಂಡತಿಗೂ, ಇವರ ಹೆಂಡತಿಗೂ, ಇವರಿಬ್ಬರೂ ಇಲ್ಲದ ವೇಳೆಯಲ್ಲಿ ಬಾವಿಯಲ್ಲಿ ನೀರು ಸೇದುವಾಗ ಬಹಳ ಕಲಹವಾಯಿತು. ಅದನ್ನು ಆಚಾರ್ಯಪತ್ನಿಯು ತಮ್ಮ ಪತಿಯೊಡನೆ ಹೇಳಲು ಅವರು ರಾಮಾನುಜಾಚಾರ್ಯರ ಮನಸ್ಸಿಗೆ ಕಷ್ಟವಾಗುತ್ತೆಂದೂ ತಮಗೆ ಭಾಗವತಾಪಚಾರ ಒದಗುವುದೆಂದೂ ಯೋಚಿಸಿ ಹೇಳದೆಯೇ ಸಕುಟುಂಬರಾಗಿ ಶ್ರೀರಂಗಕ್ಕೆ ಹೊರಟುಹೋದರು ರಾಮಾನುಜಾಚಾರ್ಯರು ಮನೆಗೆ ಬಂದು ನೋಡುವಲ್ಲಿ ಆಚಾರ್ಯರನ್ನು ಕಾಣದೆ ತಮ್ಮ ಹೆಂಡತಿಯನ್ನು ಕೇಳಿದಾಗ ಅವಳು ತಮಗೂ ಆಚಾರ್ಯರ ಪತ್ನಿಗೂ ಕಲಹವಾದುದನ್ನು ಹೇಳಿ, ಅದರಿಂದ ಹೊರಟುಹೋಗಿರಬಹುದೇನೋ ಎಂದಳು. ಆಗ ರಾಮಾನುಜಾಚಾರ್ಯರು "ನೀನು ಹಿಂದೆಯೇ ಎರಡಾವರ್ತಿ ಭಾಗವತಾಪಚಾರ ಪಟ್ಟೆ, ಈಗಲೂ ಅಸಹ್ಯಾಪಚಾರಕ್ಕೆ ಒಳಗಾದೆ" - ಎನ್ನುತ್ತ ತಾವು ಸನ್ಯಾಸಾಶ್ರಮವನ್ನು ಸ್ವೀಕರಿಸಿದರು ಅನಂತರ ವರದರಾಜರು ಇವರಿಗೆ "ರಾಮಾನುಜಮುನಿ" ಎಂದು ಹೆಸರನ್ನಿಟ್ಟರು

ಅನಂತರ ಯಾದವಪ್ರಕಾಶರ ತಾಯಿಯು "ನೀವು ರಾಮಾನುಜಾಚಾರ್ಯರಿಂದ ಪಂಚಸಂಸ್ಕಾರವನ್ನು ಪಡೆದು ಅವರಂತೆಯೇ ತ್ರಿದಂಡ ಸನ್ಯಾಸಿಯಾಗಿರಿ" ಎಂದು ಮಗನಿಗೆ ಹೇಳಿದ್ದರಿಂದಲೂ, ರಾಮಾನುಜಾಚಾರ್ಯರು ವರದರಾಜನ ಕೃಪೆಗೆ ಪಾತ್ರರೆಂದು ತಿಳಿದಿದ್ದರಿಂದಲೂ, ಮಹಾಜ್ಞಾನಿ ಎಂಬುದಾಗಿಯೂ, ಅಂಶಪುರುಷರೆಂದು ತಿಳಿದುದರಿಂದಲೂ, ರಾಮಾನುಜಾಚಾರ್ಯರನ್ನು ಆಶ್ರಯಿಸದ ಹೊರತು ತನಗೆ ಸದ್ಗತಿ ದೊರೆಯುವುದಿಲ್ಲವೆಂದೂ, ಯಾದವಪ್ರಕಾಶರು ತಿಳಿದು ಆಶ್ರಯಿಸಬೇಕಾದರೂ ಇದುವರೆಗೂ ತಾನು ಗಾಯತ್ರೀ ಶಿಖಾಯಜ್ಞೋಪವೀತಾದಿಗಳನ್ನು ತ್ಯಾಗಮಾಡಿದ್ದುದರಿಂದ ಅದಕ್ಕೆ ಪ್ರಾಯಶ್ಚಿತ್ತಾರ್ಥವಾಗಿ ಭೂಪ್ರದಕ್ಷಿಣೆ ಮಾಡಬೇಕೆಂತಲೂ, ವೃದ್ಧನಾದುದರಿಂದ ಅದಕ್ಕೂ ತನಗೆ ಶಕ್ತಿ ಇಲ್ಲವೆಂದು ತನ್ನ ತಾಯಿಯ ಸಂಗಡ ಹೇಳಿದರು. ಅದಕ್ಕೆ ಅವರ ತಾಯಿಯು "ಏಕೆ ಯೋಚನೆ ಮಾಡುವಿ, ರಾಮಾನುಜಾಚಾರ್ಯರನ್ನು ಪ್ರದಕ್ಷಿಣೆ ಮಾಡಿದರೆ ಅದು ಭೂಪ್ರದಕ್ಷಿಣವಲ್ಲವೇ?" ಎಂದು ಹೇಳಲು, ಇವರು ಅದಕ್ಕೆ ಅನುಮಾನ ಪಡುತ್ತಾ "ಉಭಯ ಭ್ರಷ್ಟನಾದೇನಲ್ಲಾ" ಎಂದು ಚಿಂತಿಸಿ ಒಂದು ದಿವಸ ತಿರುಕ್ಕಚ್ಚಿನಂಬಿಯವರನ್ನು "ನನ್ನ ಮನಸ್ಸಿನಲ್ಲಿ ಏನೋ ಒಂದು ವಿಷಯವಿದೆ ಅದು ಯಾವುದು ಎಂಬುದನ್ನೂ ಮುಂದೆ ನಾನು ಮಾಡಬೇಕಾದುದನ್ನೂ ನೀವು ವರದರಾಜರನ್ನು ಕೇಳಿ ನನಗೆ ಅಪ್ಪಣೆ ಕೊಡಿಸಬೇಕು" ಎಂದು ಪ್ರಾರ್ಥಿಸಿದರು

ತಿರುಕ್ಕಚ್ಚಿನಂಬಿಯವರು ಆ ವಿಷಯವನ್ನು ವರದರಾಜರನ್ನು ಕೇಳಲು, ವರದರಾಜದೇವರು "ಈ ಯಾದವ ಪ್ರಕಾಶನು ಅನೇಕ ಕಾರಣಗಳಿಂದ ತಾನು ರಾಮಾನುಜಾಚಾರ್ಯರ ಶಿಷ್ಯನಾಗಬೇಕೆಂದು ಯೋಚಿಸಿ ಪ್ರಾಯಶ್ಚಿತ್ತಕ್ಕಾಗಿ ಭೂಪ್ರದಕ್ಷಿಣ ಮಾಡಬೇಕೆಂತಲೂ ಅದಕ್ಕೆ ಶಕ್ತಿ ಇಲ್ಲದುದರಿಂದ ಚಿಂತಾಕ್ರಾಂತನಾಗಿರುವಾಗ ಅವನ ತಾಯಿಯು "ಭೂಪ್ರದಕ್ಷಿಣಕ್ಕೆ ಬದಲಾಗಿ ರಾಮಾನುಜರನ್ನು ಪ್ರದಕ್ಷಿಣ ಮಾಡು" ಎಂದು ಹೇಳಿದಳು. ಅದಕ್ಕೆ ಅನುಮಾನ ಪಡುತ್ತಾ ಇದ್ದಾನೆ ರಾಮಾನುಜರನ್ನು ಪ್ರದಕ್ಷಿಣ ಮಾಡಿ ಅವರನ್ನೇ ಆಶ್ರಯಿಸ ಹೇಳಿರಿ" ಎಂದು ಹೇಳಲು, ತಿರುಕ್ಕಚ್ಚಿನಂಬಿಯೂ ಅದನ್ನೇ ಹೇಳಲು, ಯಾದವಪ್ರಕಾಶರು ಆ ರಾಮಾನುಜರ ಮತ, ಆಚಾರ ಇವುಗಳ ಸಾಮಂಜಸ್ಯವನ್ನು ನೋಡಿ ರಾಮಾನುಜಾಚಾರ್ಯರನ್ನು ಪ್ರದಕ್ಷಿಣ ಮಾಡಿ ಅವರಿಂದ ಪಂಚ ಸಂಸ್ಕಾರಗಳನ್ನೂ ಪಡೆದು ತ್ರಿದಂಡ ಸನ್ಯಾಸವನ್ನೂ ಪರಿಗ್ರಹಿಸಿ "ಗೋವಿಂದ ಜೀಯರ್" ಎಂಬ ಹೆಸರನ್ನೂ ಪಡೆದರು.

## ಶ್ರೀ ರಾಮಾನುಜಾಚಾರ್ಯರು ಕಾಂಚೀಪುರದಿಂದ ಶ್ರೀರಂಗಕ್ಕೆ ದಯಮಾಡಿಸಿದುದು

ಹೀಗಿರುವಲ್ಲಿ ಶ್ರೀರಂಗದಲ್ಲಿ ಆಳವಂದಾರರ ಶಿಷ್ಯರುಗಳು "ನಮ್ಮ ಆಚಾರ್ಯರ ಮನೋರಥ ಪೂರ್ತಿ ಇನ್ನೂ ಆಗಲಿಲ್ಲವಲ್ಲಾ - ಎಂದೂ, ರಾಮಾನುಜಾಚಾರ್ಯರು ಇಲ್ಲಿ ದಯಮಾಡಿಸಿ ಶ್ರೀರಂಗನಾಥನ ಸರ್ವವಿಧ ಕೈಂಕರ್ಯವನ್ನು ನಡೆಸುವುದು, ಉಭಯವೇದಾಂತ ಪ್ರವಚನವನ್ನು ಮಾಡಿ ಚೇತನೋಜ್ಜೀವನವನ್ನು ಮಾಡುವುದು ಇವುಗಳಿಂದ ನಮ್ಮ ಯಾಮುನಾಚಾರ್ಯರ ಮನೋರಥವು ಪೂರ್ತಿಯಾಗುವುದು ಎಂದೂ, ಆಲೋಚಿಸಿ ರಾಮಾನುಜಾಚಾರ್ಯರನ್ನು ಕರೆದುಕೊಂಡು ಬರುವುದಕ್ಕೋಸ್ಕರ "ತಿರುವರಂಗಪ್ಪೆರುಮಾಳರೈಯರ್‌" ಎಂಬುವರನ್ನು ಕಳುಹಿಸಿದರು.

ಅವರು ಕಾಂಚೀಪುರಕ್ಕೆ ದಯಮಾಡಿಸಿ, ರಾಮಾನುಜಾಚಾರ್ಯರನ್ನು ಕಳುಹಿಸುವುದಕ್ಕೆ ಸ್ವಲ್ಪವೂ

(31 ನೇ ಪುಟನೋಡಿ)

# ಆದಿ ಶಂಕರಾಚಾರ್ಯರು

ಪ್ರೊ|| ವಿ. ಎಸ್. ಶೇಷಗಿರಿರಾವ್

ಆದಿಶಂಕರಾಚಾರ್ಯರು ಅದ್ವೈತ ವೇದಾಂತದ ಸೀಮಾಪುರುಷ. ಅವರು ಯುಗ ಪುರುಷರು, ಮಹಾನ್ ದಾರ್ಶನಿಕರು, ಮಹಾತ್ಮರು, ಮಾನವೀಯತೆಯ ಹರಿಕಾರರು ಅನೇಕ ದೃಷ್ಟಿಯಲ್ಲಿ ಅವರು ಅಸಮಾನ್ಯ ಪುರುಷರು ಅನೇಕ ಮತ ಪಂಥಗಳಲ್ಲಿ, ಭಾವೈಕ್ಯತೆಯನ್ನು ಉಂಟುಮಾಡಲು ಅವರು ನಿರಂತರ ಶ್ರಮಿಸಿದರು ಭಾರತದ ಉದ್ದಗಲಕ್ಕೂ ಸಂಚರಿಸಿ ಜನರಲ್ಲಿ ಧರ್ಮ ಜಾಗೃತಿಯನ್ನು ಉಂಟು ಮಾಡಿದರು. ಅವರು ಶ್ರೇಷ್ಠ ಜ್ಞಾನಿಗಳಷ್ಟೇ ಅಲ್ಲ, ಸದ್ಭಕ್ತರೂ ಹೌದು ಲೋಕದ ಕಲ್ಯಾಣಕ್ಕಾಗಿ ಹಗಲಿರುಳೂ ದುಡಿದು ಲೋಕದ ಸಂಕಷ್ಟಗಳ ಕಗ್ಗಂಟನ್ನು ಜ್ಞಾನಧಾರೆಯಿಂದ ಬಿಡಿಸಿ, ಭಕ್ತಿರಸದಿಂದ ಶಮನ ಮಾಡಿ ಶಂಕರರೆನಿಸಿದರು ಜ್ಞಾನ, ಭಕ್ತಿ, ಅಭ್ಯುದಯ ನಿಃಶ್ರೇಯಗಳು ಅವರ ತತ್ವಚಿಂತನೆಯಲ್ಲಿ ಬಹಳ ಚೆನ್ನಾಗಿ ಸಮನ್ವಯಗೊಂಡಿವೆ ಆತ್ಯಂತಿಕ ಸತ್ವವನ್ನು ಅವರು ನಿರ್ಗುಣವೆಂದು ಕರೆದರೂ, ಅವರಷ್ಟು ಸಗುಣದೇವತಾ ಸ್ತೋತ್ರಗಳನ್ನು ರಚಿಸಿದವರು ವಿರಳ

ಶಂಕರರ ಕಾಲ, ಕ್ರಿಶ ಸುಮಾರು ಎಂಟನೆಯ ಶತಮಾನ. ಅವರ ತಂದೆಯವರು ಶಿವಗುರು, ತಾಯಿ ಆರ್ಯಾಂಬೆ. ಶಂಕರರು ಎಂಟನೆಯ ವಯಸ್ಸಿಗೇ ವೇದಶಾಸ್ತ್ರಗಳನ್ನು ಕರಗತಮಾಡಿಕೊಂಡಿದ್ದರು ಗೋವಿಂದ ಭಗವತ್ಪಾದರಿಂದ ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಿ ಬಾಲಸನ್ಯಾಸಿಗಳಾದರು. ಅವರು ಜೀವಿಸಿದ್ದು ೩೨ ವರ್ಷಗಳ ಮಾತ್ರ. ಆ ಅಲ್ಪ ಕಾಲಾವಧಿಯಲ್ಲಿಯೇ ಅವರು ಲೋಕಕ್ಕೆ ಅಸದೃಶ ಬೆಳಕನ್ನು ನೀಡಿದರು

ಶಂಕರರು ಭರತಭೂಮಿಗೆ ಕಾಲಿಡುವುದಕ್ಕೆ ಮುನ್ನ ಮತಧರ್ಮಗಳು ವಿಪರೀತವಾಗಿ ಬೆಳೆದಿದ್ದವು. ಮತಮತಗಳಲ್ಲಿ ದ್ವೇಷಾಸೂಯೆಗಳು ಭುಗಿಲೆದ್ದು ಕರಾಳ ನೃತ್ಯ ಮಾಡುತ್ತಿದ್ದವು; ಎಲ್ಲೆಲ್ಲೂ ಸಂಘರ್ಷ ಉಂಟಾಗಿತ್ತು ದುರಾಚಾರ, ವಾಮಾಚಾರಗಳು ಹೇರಳವಾಗಿ ಪ್ರಚಲಿತವಿದ್ದವು. ಹಿಂಸೆ, ಮದ್ಯಸೇವನೆಯ ಚಟ, ಸ್ವಚ್ಛಂದ ಕಾಮಜೀವನಗಳು ತಂತ್ರಗಳ ಹೆಸರಿನಲ್ಲಿ ಎಲ್ಲೆಲ್ಲೂ ತಲೆ ಎತ್ತಿದ್ದವು. ಸಾಮಾಜಿಕ ನೀತಿ ನಿಯಮಗಳನ್ನು ಗಾಳಿಗೆ ತೂರಲಾಗಿತ್ತು ಮಾನವೀಯತೆಯನ್ನೇ ತನ್ನ ಚಿಂತನೆಯ ಕೇಂದ್ರಬಿಂದುವಾಗಿ ಹೊಂದಿದ್ದ ಶುದ್ಧ ವೈದಿಕಧರ್ಮ ನಶಿಸಿಹೋಗುವ ಅಂಚಿನಲ್ಲಿತ್ತು ಚಾರ್ವಾಕರ ನೀತಿಗೇಡಿತನ, ವಿಷಯಲೋಲುಪತೆಗಳು ಸಮಾಜದಲ್ಲಿ ಬಹಳ ಪ್ರಬಲವಾಗಿದ್ದವು. ಆಗ ಜೀವನಕ್ಕೆ ಸದೃಢವಾದ ಅಸ್ತಿಭಾರ ಇರಲಿಲ್ಲ ಆಧ್ಯಾತ್ಮಿಕ ಮತ್ತು ತಾತ್ವಿಕ ಕ್ಷೇತ್ರಗಳಲ್ಲಿ ಸಂದಿಗ್ಧತೆ ಉಂಟಾಗಿತ್ತು ಅಂದಿನ ರಾಷ್ಟ್ರೀಯ ಜೀವನಕ್ಕೆ ಅಗಾಧವಾದ ಅಪಾಯ ಬಂದೊದಗಿತ್ತು. ಅನಾಚಾರ, ಅವ್ಯವಹಾರ ಅನೀತಿಗಳನ್ನು ಮೆಟ್ಟಿನಿಂತು ಶಂಕರರು, ವೈದಿಕಧರ್ಮವನ್ನು ಉಜ್ವಲವಾಗಿ ಬೆಳಸಿದರು, ಅದರ ಅಮರ ಸಂದೇಶವನ್ನು ತಮ್ಮ ಪ್ರಚಂಡ ಬುದ್ಧಿಶಕ್ತಿಯಿಂದ, ಆಳವಾದ ಅನುಭಾವದಿಂದ ಇಡೀ ಲೋಕಕ್ಕೇ ಸಾರಿದರು.



ಭಾರತದಲ್ಲಿ ವೇದಗಳ ಕಾಲದಿಂದಲೂ ಅದ್ವೈತ ವಿಚಾರ ಪ್ರವಾಹ ಹರಿದು ಬಂದಿದೆ "ಏಕಂಸತ್ ವಿಪ್ರಾ ಬಹುಧಾ ವದಂತಿ" ಅಂದರೆ ಸತ್ಯವು ಒಂದೇ, ಮೇಧಾವಿಗಳು ಅದನ್ನು ನಾನಾರೀತಿಯಲ್ಲಿ ವಿವರಿಸುತ್ತಾರೆ ಎಂದು ವೈದಿಕ ಋಷಿಗಳು ಹೇಳಿದ್ದಾರೆ 'ಇಡೀ ಮಾನವತೆ ಒಂದು' ಎನ್ನುವ ವೇದಗಳ ಸಂದೇಶವನ್ನು, ಶಂಕರರು ಅದ್ವೈತ ವೇದಾಂತದ ಸಾರವನ್ನಾಗಿ ಮಾಡಿಕೊಂಡರು 'ಬ್ರಹ್ಮಸತ್ಯಂ, ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾ ಪರಃ' ಎಂಬ ಅರ್ಧ ಶ್ಲೋಕದಲ್ಲಿ ಅದರ ಸಾರವಿದೆ ಬ್ರಹ್ಮವೊಂದೇ ಸತ್ಯ ಜಗತ್ತು ಮಿಥ್ಯೆ ಜೀವಾತ್ಮನು ಸಾರದಲ್ಲಿ ಬ್ರಹ್ಮವೇ ಆಗಿದ್ದಾನೆ ಎಂದು ಅದರ ಅರ್ಥ ಬ್ರಹ್ಮವು ನಿರ್ಗುಣ, ನಿರಾಕಾರ, ನಿರವಯವ, ನಿತ್ಯ ನಿರಂಜನ, ಸಚ್ಚಿದಾನಂದ ಸ್ವರೂಪವೇ ಅದು. ಅದನ್ನು ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ ಕಟ್ಟಿಹಾಕಲು ಸಾಧ್ಯವಿಲ್ಲ. ಅಂತಹ ನಿರ್ಗುಣ ಬ್ರಹ್ಮವೇ ಉಪಾಸನೆಗಾಗಿ ಸಗುಣ ಬ್ರಹ್ಮವಾಗಿ ತೋರ್ಪಡಿಸಿಕೊಳ್ಳುತ್ತದೆ. ವ್ಯಕ್ತಿಸ್ವರೂಪ ಉಳ್ಳ ಸಗುಣ ಬ್ರಹ್ಮವೇ, 'ಈಶ್ವರ'ನೆಂದು ಕರೆಯಲ್ಪಡುತ್ತದೆ. ಈಶ್ವರನು ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆಗಿದ್ದಾನೆ. ಮಾಯೆ ಆತನ ಅವ್ಯಕ್ತ ಶಕ್ತಿ ಅದರಿಂದ ಆತನು ಜಗತ್ತನ್ನು ಸೃಷ್ಟಿಸುತ್ತಾನೆ. ಆತನು ಅದನ್ನು ಸ್ಥಿತಿಯಲ್ಲಿಡುತ್ತಾನೆ. ಕೊನೆಗೆ ಲಯ ಮಾಡುತ್ತಾನೆ. ಆತನು ಹೀಗೆ ಜಗತ್ತಿನ ಉಪಾದಾನಕಾರಣನೂ ನಿಮಿತ್ತಕಾರಣನೂ ಆಗಿದ್ದಾನೆ

ಜೀವಾತ್ಮ ಶಂಕರರ ಪ್ರಕಾರ, ಸಾರದಲ್ಲಿ ಬ್ರಹ್ಮವೇ ಆಗಿದ್ದಾನೆ ದೇಹ, ಇಂದ್ರಿಯ ಅಹಂಕಾರ ಮುಂತಾದ ಉಪಾಧಿಗಳಿಂದ ಕೂಡಿದ ಬ್ರಹ್ಮವೇ ಸಂಸಾರಾವಸ್ಥೆಯಲ್ಲಿ ಜೀವಾತ್ಮನೆನಿಸುತ್ತದೆ. ಉಪಾಧಿ ಅವಿದ್ಯಾಕಲ್ಪಿತ. ಅವಿದ್ಯೆ ನಾಶವಾದ ಮೇಲೆ, ಜೀವಾತ್ಮ ಸಚ್ಚಿದಾನಂದ ಬ್ರಹ್ಮವಾಗಿ ಬೆಳಗುತ್ತಾನೆ. ಹೀಗೆ ಜೀವಾತ್ಮ ಮತ್ತು ಬ್ರಹ್ಮದ ಐಕ್ಯವನ್ನು ತಿಳಿಯುವುದೇ ಜ್ಞಾನ. ಅಹಂ ಬ್ರಹ್ಮಾಸ್ಮಿ ತತ್ವಮಸಿ ಅಯಮಾತ್ಮಾ ಬ್ರಹ್ಮಾ - ಮುಂತಾದ ಉಪನಿಷತ್ತಿನ ಮಹಾವಾಕ್ಯಗಳು ಜೀವ - ಬ್ರಹ್ಮದ ಐಕ್ಯವನ್ನು ಒತ್ತಿ ಹೇಳುತ್ತವೆಂದು ಶಂಕರರು ಉದ್ಘೋಷಿಸುತ್ತಾರೆ.

ಶಂಕರರ ಅದ್ವೈತ ದೃಷ್ಟಿಯಲ್ಲಿ ಜಗತ್ತು ಮಿಥ್ಯೆ ಮಿಥ್ಯೆ ಎಂದರೆ ಭ್ರಾಂತಿ, ಭ್ರಮೆ ಎಂದು ತಿಳುವುದಕ್ಕಿಂತ, ತೋರಿ ಅಡಗುವುದು ಎಂದು ಹೇಳುವುದೇ ಹೆಚ್ಚು ಸಮಂಜಸ. ಎಲ್ಲಿಯ ತನಕ ಮಾನವನ ಮನಸ್ಸು ಬ್ರಹ್ಮತತ್ವದೆಡೆಗೆ ಹೋಗುವುದಿಲ್ಲವೋ ಎಲ್ಲಿಯ ತನಕ ಅವನು ಇಂದ್ರಿಯ ಸುಖದಲ್ಲೇ ಇರುತ್ತಾನೋ, ಅಲ್ಲಿಯ ತನಕ ಈ ಜಗತ್ತು ಅವನಿಗೆ ತೋರುತ್ತಿರುತ್ತದೆ ಬ್ರಹ್ಮಸಾಕ್ಷಾತ್ಕಾರವಾದ ಮೇಲೆ ಅದು ಅಡಗಿ ಹೋಗುತ್ತದೆ ಆದುದರಿಂದ ತ್ರಿಕಾಲ ಅಬಾಧಿತವಾದ ಸತ್ಯ ಬ್ರಹ್ಮಮಾತ್ರವೆಂದೂ ಜೀವಾತ್ಮನೇ ತಾನು ಅದೆಂದೂ ಜಗತ್ತು ಅಸ್ಥಿರ, ಅನಿತ್ಯವಾದುದರಿಂದ ಕೇವಲ ತೋರಿಕೆಯೆಂದೂ ಅದ್ವೈತ ದರ್ಶನ ಬೋಧಿಸುತ್ತದೆ. ಹೀಗೆ ಜಗತ್ತು, ಶಂಕರರ ಪ್ರಕಾರ ಶೂನ್ಯವಲ್ಲ, ಭ್ರಾಂತಿಯಲ್ಲ, ಭ್ರಮೆಯಲ್ಲ ಅದು ವ್ಯಾವಹಾರಿಕ ಸತ್ಯ ಈ

# ತಿರುಮಲೆಯಲ್ಲಿ ವಸತಿ ಸೇವಾಶುಲ್ಕ ಪರಿಷ್ಕರಣ

ತಿರುಮಲೆಯಲ್ಲಿನ ಗಣ್ಯವ್ಯಕ್ತಿಗಳ ವಸತಿಗಳ ದಿನಂಪ್ರತಿ ಸೇವಾಶುಲ್ಕವನ್ನು ಕೆಳಕಂಡಂತೆ ಪರಿಷ್ಕರಣಗೊಳಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಈ ಹೊಸ ದರ ಪಟ್ಟಿಯಂತೆ ಸೇವಾ ಶುಲ್ಕವನ್ನು ಸಲ್ಲಿಸಬೇಕೆಂದು ಕೋರಲಾಗಿದೆ.

| ವಸತಿಯ ವಿವರ | ಹಿಂದಿನದರ ದಿನಂಪ್ರತಿ | ಈಗಣ ದರ ದಿನಂಪ್ರತಿ |
|---|---|---|
| 1. ಎಸ್. ಪಿ. ಅತಿಥಿಗೃಹ ಪ್ರಾಂತ. | | |
| ಎಸ್.ಪಿ.ಜಿ.ಎಚ್. ಅತಿಥಿಗೃಹ | | |
| ಸೂಟ್ 1 ಹಾಗೂ 9 (ಮಾಸ್ಟರ್‌ಸೂಟ್ಸ್) | ರೂ. 1500/- | ರೂ. 2500/- |
| ಸೂಟ್ 2 ರಿಂದ 8 ವರೆಗೆ | ರೂ. 500/- | ರೂ. 750/- |
| 2. ಹರಿಸದನ ಅತಿಥಿಗೃಹ | | |
| ಸೂಟ್ 1ರಿಂದ 7 | ರೂ. 1000/- | ರೂ. 1500/- |
| 3. ರಾಜ್ಯಲಕ್ಷ್ಮಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 1000/- | ರೂ. 1500/- |
| ಸೂಟ್ 5 (ಮಾಸ್ಟರ್ ಸೂಟ್) | ರೂ. 1500/- | ರೂ. 1500/- |
| 4. ವಿದ್ಯಾಸದನ ಅತಿಥಿಗೃಹ | | |
| ಸೂಟ್ 2 ರಿಂದ 5 | ರೂ. 500/- | ರೂ. 750/- |
| ಸೂಟ್ 1 (ಮಾಸ್ಟರ್ ಸೂಟ್) | ರೂ. 1500/- | ರೂ. 2000/- |
| 5. ಶ್ರೀನಿವಾಸ ನಿಲಯಂ | | |
| ಸೂಟ್ 1 ರಿಂದ 4 | ರೂ. 500/- | ರೂ. 1000/- |
| ಸೂಟ್ 5 | ರೂ. 500/- | ರೂ. 500/- |
| 6. ಇಂದಿರಾ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 500/- | ರೂ. 750/- |
| 7. ಗೋದಾವರಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ. 500/- | ರೂ. 750/- |
| 8. ಎಸ್. ವಿ. ಅತಿಥಿಗೃಹ ಪ್ರಾಂತ | | |
| ವಿಶೇಷ ರೀತಿಯ ಕಾಟೇಜುಗಳು | | |
| ಎಸ್. ಜಿ. ಸಿ. ಕಾಟೇಜುಗಳು | | |
| 1 ರಿಂದ 18, 20,22. | ರೂ. 400/- | ರೂ. 600/- |
| 9. ನೂತನ ಅತಿಥಿಗೃಹಗಳು | | |
| ಅ) ವಿಷ್ಣು ನಿಲಯ | | ರೂ. 750/- |
| ಒಳಗಣ 3 ಸೂಟ್‌ಗಳು | | |
| ನೆಲ ಅಂತಸ್ತು - 2 ಸೂಟುಗಳು | | ರೂ. 750/- |
| ಮೊದಲ ಅಂತಸ್ತು ಮಾಸ್ಟರ್ ಸೂಟ್ | | ರೂ. 2000/- |
| ಆ) ಬಾಲಾಜಿ ಕುಟೀರ | | |
| 6 ಸೂಟ್‌ಗಳು (ಧರ್ಮಗಿರಿ ರಸ್ತೆ) | | ರೂ. 750/- |

ಯಾತ್ರಿಕ ಭಕ್ತರು ಮೇಲಿನ ಪರಿಷ್ಕೃತ ದರಗಳನ್ನು ಗಮನಿಸಿ ವಸತಿ ಸೌಕರ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ

**ತಿ. ತಿ. ದೇ.**

ಲೋಕ, ಈ ಲೋಕವ ಬದುಕು, ಬದುಕಿನ ಅನಂತ ಮುಖಗಳ ಬಗ್ಗೆ ಶಂಕರರಿಗೆ ಕಾಳಜಿಯಿದೆ, ಅನು ಕಂಪವಿದೆ, ಪ್ರೀತಿ ವಿಶ್ವಾಸಗಳಿವೆ. ಇಡೀ ಜಗತ್ತೇ ಬ್ರಹ್ಮಮಯ ಜಗತ್ತಿನ ರೂಪದಲ್ಲಿ ತೋರುತ್ತಿರುವ ಬ್ರಹ್ಮದ ಉಪಾಸನೆಯೇ ಬದುಕು ಅದ್ವೈತ ದರ್ಶನದಲ್ಲಿ ವಿಶ್ವಪ್ರೇಮವನ್ನು ಉಕ್ಕಿಸುವ, ಅದ್ಭುತವಾದ ತಾತ್ವಿಕ ಸೂಕ್ಷ್ಮಗಳಿವೆ. ನಿತ್ಯವಾದುದ್ದು ಯಾವುದು, ಅನಿತ್ಯವಾದುದು ಯಾವುದು ಎಂಬ ವಿವೇಕ ಈ ಜಗತ್ತಿನಲ್ಲಿ ವಾಸಿಸುತ್ತಿರುವ ಜೀವಾತ್ಮನಿಗೆ ಇರಬೇಕು, ಫಲಾಪೇಕ್ಷೆ ಯಿಲ್ಲದೆ ನಿಷ್ಕಾಮ ಕರ್ಮವನ್ನು ಮಾಡಬೇಕು, ಏಕಾಗ್ರತೆ, ಇಂದ್ರಿಯ ನಿಗ್ರಹ, ಶೋಕರಹಿತತೆ, ಮನಶ್ಯಾಂತಿ, ಚಿತ್ತ ಸಮಾಧಾನ ಮತ್ತು ಶ್ರದ್ಧೆಗಳನ್ನು ಜೀವಾತ್ಮ ಬೆಳೆಸಿಕೊಳ್ಳಬೇಕು, ಜೀವಾತ್ಮನಿಗೆ ಮುಕ್ತಿಯ ತೀವ್ರ ಅಪೇಕ್ಷೆ ಇರಬೇಕು, ಅರಿಷಡ್ವರ್ಗಗಳನ್ನು ಗೆಲ್ಲದೆ ಮೋಕ್ಷವಿಲ್ಲ ಎಂದು ಶಂಕರರು ಲೋಕಪರವಾದ ಉಪದೇಶವನ್ನು ನೀಡಿದ್ದಾರೆ. ಜ್ಞಾನಮಾರ್ಗವೊಂದೇ ಮೋಕ್ಷಕ್ಕೆ ಸಾಧನ. ಸಚ್ಚಿದಾನಂದ ಸ್ವರೂಪದ ಬ್ರಹ್ಮಾನುಭವವೇ ಮೋಕ್ಷ; ಹುಟ್ಟು ಸಾವುಗಳ ನಿರಂತರ ಚಕ್ರದ ನಿಲುಗಡೆಯೇ ಮೋಕ್ಷ, ಅದು ನಿತ್ಯಶುದ್ಧ ಬುದ್ಧಸ್ವರೂಪದ್ದು. ಸಶರೀರಿಯಾಗಿದ್ದಾಗಲೇ ಮೋಕ್ಷವನ್ನು ಹೊಂದಬಹುದೆಂದೂ, ಅದೇ ಜೀವನ್ಮುಕ್ತಿಯೆಂದೇ ಶಂಕರರು ಸಾರುತ್ತಾರೆ. ಜೀವನ್ಮುಕ್ತಿ, ಲೋಕ ಜೀವನಕ್ಕೆ ಅರ್ಥವಂತಿಕೆಯನ್ನು ತಂದುಕೊಡುತ್ತದೆಂದೂ ಅವರು ಉಪದೇಶಿಸುತ್ತಾರೆ. ವಿದೇಹ ಮುಕ್ತಿ ದೇಹಾವಸಾನವಾದ ಮೇಲೆ ದೊರಕುವಂಥದು. ವಸುಧೆಯೇ ನನ್ನ ಬಂಧು-ಬಳಗ, ವಸುಧೆಯೇ ವಿಶ್ವಕುಟುಂಬ' ಎಂಬ ಉದಾರ ಚಾರಿತ್ರ್ಯ ಶಂಕರರದು.

ಶಂಕರರದು ಸರ್ವಧರ್ಮ ಸಮನ್ವಯ ಸಂದೇಶ. ಪಂಚಾಯತನ ಪೂಜೆಯನ್ನು ರೂಢಿಗೆ ತಂದವರು ಅವರು. ಅವರು ಷಣ್ಮತ ಸ್ಥಾಪನಾಚಾರ್ಯರು. ಅವರ ಚಿಂತನೆ ಶ್ರುತಿ, ಯುಕ್ತಿ ಹಾಗೂ ಅನುಭವ ಸಮ್ಮತವಾಗಿದೆ ಅವರು ಧರ್ಮದೀಪಕರು; ಶಿಷ್ಟಾಚಾರದ ಪೋಷಕರು. ಲೋಕಕಲ್ಯಾಣದ ಪ್ರೇರಣೆಯನ್ನು ಪುಟಿದೆಬ್ಬಿಸುವ ಸಂದೇಶ ಶಂಕರರದು. ಬದುಕು ಸುಖ, ಸಂಪತ್ತು, ಸಮೃದ್ಧಿ, ಸಾಮರಸ್ಯಗಳಿಂದ ಕೂಡಿ ಆನಂದಮಯವಾಗಬೇಕು ಎಂಬ ಪ್ರಬಲ ಆಶಾವಾದ ಶಂಕರರ ಲೋಕೋಪದೇಶದಲ್ಲಿ ಕೆನಗಟ್ಟಿ ನಿಂತಿದೆ. ರಾಷ್ಟ್ರೀಯ ಭಾವೈಕ್ಯತೆಯ ವೈಜಯಂತಿಯನ್ನು ಹಾರಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.



# ನೃಸಿಂಹಕ್ಷೇತ್ರಗಳು

ಪ್ರೊ|| ಸಿ. ಗೋವಿಂದಾಚಾರ್

ವಿವಿಧ ಜಾತಿ ಮತಗಳ ಸಮುದಾಯ ಹಾಗೂ ಧಾರ್ಮಿಕ ಶಕ್ತಿಯ ಪ್ರಾಬಲ್ಯವು ಕರ್ಣಾಟಕ ಸಂಸ್ಕೃತಿಯ ಲಕ್ಷಣವನ್ನು ಪ್ರತಿಬಿಂಬಿಸುತ್ತದೆ. ಶ್ರೀನಿವಾಸ, ನೃಸಿಂಹ ರಾಮ ಕೃಷ್ಣ ರಂಗನಾಥ ಮುಂತಾದ ವೈಷ್ಣವ ದೇವಸ್ಥಾನಗಳ ಶಿವ, ಗಣೇಶ, ಸುಬ್ರಹ್ಮಣ್ಯ ಮತ್ತು ಶಕ್ತಿ ದೇವತೆಗಳ ಧಾಮವಾದ ಕರ್ಣಾಟಕ ಅನಾದಿ ಕಾಲದಿಂದಲೂ ಸರ್ವ ಧರ್ಮ ಸಮನ್ವಯ ಹಾಗೂ ಭಕ್ತಿಮಾರ್ಗಕ್ಕೆ ಪುಷ್ಟಿ ಕೊಟ್ಟಿದೆ 'ಕರಿಗಿರಿ' ಕ್ಷೇತ್ರ ಎಂದು ಪ್ರಸಿದ್ಧಿಯಾದ ದೇವರಾಯನದುರ್ಗದ ಸುತ್ತಲೂ ಎಂಟು ದಿಕ್ಕಿನಲ್ಲೂ ವಿವಿಧ ಕ್ಷೇತ್ರಗಳಿವೆ. (ಗರುಡಾದ್ರಿ, ಕೂರ್ಮಾಚಲ ಶಿವಗಂಗೆ ಇತ್ಯಾದಿ)

ಎಂಟು ದಿಕ್ಕುಗಳಲ್ಲೆಂಟು ಕ್ಷೇತ್ರಗಳೆಂಟೆಂಟು
ದಿವ್ಯಧಾಮಗಳಿಂದೊಡ ಗೂಡಿ ಸ್ತುತಿಸಿಹವು
ಹಾಡಿಹವು ನಿನಗೆ ಶುಭೋದಯವ
ಕರಿಗಿರೀಶನೆ
ಸುಪ್ರಭಾತವು ನಿನಗೆ ಶ್ರೀ ಲಕ್ಷ್ಮೀನರಸಿಂಹ

ಇದರ ಸ್ಥಳಪುರಾಣದಲ್ಲೇ ನಂದೀದುರ್ಗದ ಸ್ಥಳ ಪುರಾಣವೂ ಸೇರಿದೆ. ಈ ಎರಡೂ ಕ್ಷೇತ್ರಗಳಿಗೆ ಸಾಮ್ಯವಿದೆ ಇಲ್ಲಿ ಕುಂಭೀ ಬೆಟ್ಟದ ಮೇಲೆ ಯೋಗಲಕ್ಷ್ಮೀನೃಸಿಂಹ, ಕೆಳಗಡೆ ಭೋಗಲಕ್ಷ್ಮೀನೃಸಿಂಹನಾದರೆ, ನಂದಿದುರ್ಗದಲ್ಲಿ (ವೃಷಭಾಚಲ) ಯೋಗ/ಭೋಗ ನಂದೀಶ್ವರ. ಹೆಗ್ಗಡದೇವನ ಕೋಟೆ ತಾಲ್ಲೂಕಿನ ಬೆಳತೂರಿನಿಂದ ಎರಡು ಕಿ.ಮೀ. ದೂರದಲ್ಲಿ ಬೆಟ್ಟದ ನೃಸಿಂಹಗುಡಿ ಇದೆ (ಅಳಸಿಂಗರ್ ಬೆಟ್ಟ) ಪಕ್ಕದಲ್ಲೇ ಚಿಕ್ಕದೇವಮ್ಮನ ಸನ್ನಿಧಿಯೊಂದಿದೆ ಇವಳು ನೃಸಿಂಹನ ಸೋದರಿ ಎಂದು ಪ್ರತೀತಿ ನೃಸಿಂಹನಿಗೆ ಹರಕೆ ಸಲ್ಲಿಸಿದ ಮೇಲೆಯೇ ಇವಳಿಗೆ ಹರಕೆ ಸಲ್ಲಿಸುವರು

ಪ್ರಹ್ಲಾದಾರ್ಥೇ ನೃಸಿಂಹ (ದೇಶಿಕರ ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿ) ಎಂದು ಓರ್ವ ಭಕ್ತನಿಗಾಗಿಯೇ ತ್ವರಾತಿಶಯದಿಂದ ಭಗವಂತನು ಸಂಭವಿಸಿದ. ಬಹುಶಃ ಅದೇ ತತ್ವ ಕರ್ಣಾಟಕಕ್ಕೆ ವಿಶೇಷವಾಗಿ ಅನ್ವಯಿಸುವುದೋ ಏನೋ ಎಂಬಂತೆ ಇಲ್ಲಿ ಭಗವಂತನು ವ್ಯಾಪಕವಾಗಿದ್ದಾನೆ. ಚಿಕ್ಕ ಎಂಬ ಕುರುಬನಿಂದ ಚಿಕ್ಕನಹಳ್ಳಿ ನೃಸಿಂಹಕ್ಷೇತ್ರ, ಓರ್ವ ಅಗಸನಿಗಾಗಿ ತಿರುಮಕೂಡಲು ನರಸಿಪುರ, ಕುಂಟ ಪಾಳೇಗಾರನಿಂದ ಬೆಳತೂರು ನೃಸಿಂಹ ಕ್ಷೇತ್ರ ಇತ್ಯಾದಿ ಒಳ್ಳೆಯ ನಿದರ್ಶನವಾಗಿವೆ. ನೃಸಿಂಹಕ್ಷೇತ್ರಗಳು ಹೆಚ್ಚಾಗಿ ದಕ್ಷಿಣಭಾರತದಲ್ಲಿ ಅದರಲ್ಲೂ ಕರ್ಣಾಟಕದಲ್ಲಿ ಕೇಂದ್ರೀಕೃತವಾಗಿವೆ. ಅಖಿಲ ಕರ್ಣಾಟಕದಲ್ಲಿ ಸುಮಾರು ೮೫ ನೃಸಿಂಹಕ್ಷೇತ್ರಗಳಿವೆ. ಇವುಗಳಲ್ಲಿ ಹಳೆ ಮೈಸೂರು ರಾಜ್ಯದಲ್ಲಿ ೫೫ ಇವೆ. ಜಿಲ್ಲಾವಾರು ವಿಂಗಡಣೆ :-



ಮೈಸೂರು: ಟಿ.ನರಸೀಪುರ, ಅಕ್ಕಿಹೆಬ್ಬಾಳು, ಸಾಲಿಗ್ರಾಮ, ಅಗರ, ಸರಗೂರು, ಕುಂಟು ಬೆಳತೂರು ಇತ್ಯಾದಿ

ಮಂಡ್ಯ : ಮೇಲುಕೋಟೆ, ತೊಂಡನೂರು, ಶ್ರೀರಂಗಪಟ್ಟಣ, ಮದ್ದೂರು, ಮಾರೇಹಳ್ಳಿ ಇತ್ಯಾದಿ.

ಹಾಸನ : ಹೊಳೆನರಸೀಪುರ, ಗೋರೂರು, ನುಗ್ಗೆಹಳ್ಳಿ, ಶಾಂತಿಗ್ರಾಮ, ಮುದಿಗೆರೆ, ಹೊರಕೆರೆ ದೇವಪುರ, ಅರಕಲಗೂಡು ಇತ್ಯಾದಿ

ತುಮಕೂರು · ದೇವರಾಯನ ದುರ್ಗ, ಶಿಬಿ, ಮೂಕನಹಳ್ಳಿ, ದಾಳವಟ್ಟ, ದೊಡ್ಡದಲೆ ಇತ್ಯಾದಿ.

ಬೆಂಗಳೂರು · ಯಲಹಂಕ, ಹೆಸರಘಟ್ಟ, ಬನ್ನೇರು ಘಟ್ಟ, ಅತ್ತಿಗುಪ್ಪೆ ಘಾಟಿ, ಸಾವನದುರ್ಗ, ಸುಗ್ಗನಹಳ್ಳಿ ಇತ್ಯಾದಿ

ಇತರೆ · ಶಿವಮೊಗ್ಗದ ಭದ್ರಾವತಿ, ಕೂಡಲಿ, ಕುಬಟೂರು, ದಕ್ಷಿಣ ಕನ್ನಡದ ಮುಲ್ಕಿ ಕುಕ್ಕೆ ಕಡೇಶಿವಾಲಯ, ಕೋಲಾರದ ಚಿಕ್ಕನ ಹಳ್ಳಿ, ಮುಳಬಾಗಿಲು, ಶಿಂಗ್ರಪಳ್ಳಿ, ಧಾರವಾಡದ ಹಾವೇರಿ, ಬ್ಯಾಡಗಿ, ಉತ್ತರ ಕನ್ನಡದ ಗೋಕರ್ಣ, ಬಿದರ್‌ನ ಗುಹಾ ಝುರಿಣೆ ನೃಸಿಂಹ, ರಾಯಚೂರಿನ ಕೊಪ್ಪ, ಬೀಜಾಪುರದ ತೊರವೆ - ಇತ್ಯಾದಿ

ಹತ್ತಾರು ಅಗೋಚರ ನೃಸಿಂಹದೇವಸ್ಥಾನಗಳು ಹಾಗೂ ಬೇರೆ ವಿಷ್ಣುಕ್ಷೇತ್ರಗಳಲ್ಲಿರುವ ನೃಸಿಂಹ ಉಪಸನ್ನಿಧಿಗಳು ಈ ಪಟ್ಟಿಯಲ್ಲಿ ಸೇರಿಲ್ಲ ಉದಾ- ನಾಗಮಂಗಲ (ಮಂಡ್ಯಜಿಲ್ಲೆ) ಸೌಮ್ಯಕೇಶವ ದೇವಸ್ಥಾನದಲ್ಲಿರುವ ಯೋಗನೃಸಿಂಹದೇವಸ್ಥಾನ ಮದ್ದೂರಿನ ಸಮೀಪ ನಿಲುವಾಗಿಲು ಯೋಗಾ ನೃಸಿಂಹಕ್ಷೇತ್ರ ಇದುವರೆಗೂ ಅಗೋಚರವಾಗಿದ್ದು ಈಗೀಗ ಸ್ವಲ್ಪಸ್ವಲ್ಪವಾಗಿ ಅಭಿವೃದ್ಧಿ

## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು



* * *

ಹೊಂದುತ್ತಾ ಇದೆ. ಹೀಗೆಯೇ ಚಿಕ್ಕಮಗಳೂರು ಜಿಲ್ಲೆಯ ತರಿಕೆರೆ ಸಮೀಪ ಬಗ್ಗವಳ್ಳಿ ಯೋಗಾನೃಸಿಂಹ ದೇವಸ್ಥಾನ ಪಾಳುಬಿದ್ದಂತಿದೆ.

ನಗರ / ಪಟ್ಟಣಗಳಲ್ಲಿರುವ ನೃಸಿಂಹ ದೇವಸ್ಥಾನಗಳು ವರಮಾನದ ದೃಷ್ಟಿಯಿಂದ ಪ್ರಮುಖವಾದುವು. ಬೆಂಗಳೂರಿನ ಬಳೆಪೇಟೆ, ದಂಡುಪ್ರದೇಶದ ಕಮರ್ಷಿಯಲ್ ರಸ್ತೆ ಆರಂಭದಲ್ಲಿರುವ ಹಾಗೂ ಮಲ್ಲೇಶ್ವರದ (ತಿ.ತಿ ದೇ ಕಲ್ಯಾಣಮಂಟಪ ಸಮೀಪ) ನೃಸಿಂಹದೇವಸ್ಥಾನಗಳು, ಹುಬ್ಬಳಿ, ಬಳ್ಳಾರಿಯಲ್ಲಿರುವ ದೇವಸ್ಥಾನಗಳು ಉದಾಹರಣೆಗಳಾಗಿವೆ ಮೈಸೂರು ನಗರದಲ್ಲಿ ಎರಡು ದಶಕದಿಂದೀಚೆಗೆ ಬಡಾವಣೆಗಳಲ್ಲಿ ಒಂದೆರಡು ದೇವಸ್ಥಾನಗಳು ಹುಟ್ಟಿಕೊಂಡಿವೆ ಇದಕ್ಕೆ ಮುಂಚೆ ಅಹೋಬಿಲ ಮಠವೇ ಪ್ರಮುಖವಾಗಿತ್ತು

ಇನ್ನು ಭಗವಂತನ ಸಾನಿಧ್ಯವನ್ನು ಗುರುತಿಸುವುದಾದರೆ, ನದಿ ತೀರದಲ್ಲೇ ಹೆಚ್ಚು ಕ್ಷೇತ್ರಗಳಿವೆ ೧ ಕಪಿಲಾ ತೀರದಲ್ಲಿ ಪಂಚ ನೃಸಿಂಹಕ್ಷೇತ್ರಗಳು - ಟಿ ನರಸಿಪುರ, ಹುಲ್ಲಹಳ್ಳಿ, ಕೆ. ಬೆಳತೂರು (ಮಧ್ಯನಾರಸಿಂಹ) ಸರಗೂರು ಹಾಗೂ ಮಳಲಿ (ಕಬಿನಿ ಅಣೆಕಟ್ಟು ನಿರ್ಮಾಣದಿಂದ ಇದು ನೀರಿನಲ್ಲಿ ಮುಳುಗಿ ಹೋಗಿದೆ )

೨ ನೇತ್ರಾವತಿ ತೀರದಲ್ಲಿ ಚಿಂತಾಮಣಿ ನೃಸಿಂಹ (ನೇತ್ರಾವತಿ ಕಲಿತ ಪುಣ್ಯಕುಮಾರ ಧಾರಾ ತೀರೇ ವಿಭಾತಿ ನೃಸಿಂಹಪದಂ ಪವಿತ್ರಂ - ಗುರುನರಸಿಂಹ ಸುಪ್ರಭಾತ)

೩ ಕಾವೇರಿ ತೀರದಲ್ಲಿ ಸಾಲಿಗ್ರಾಮ, ಶಾಂತಿಗ್ರಾಮ, ಶ್ರೀರಂಗಪಟ್ಟಣ, ಮಾರೇಹಳ್ಳಿ,

೪. ಶಿಂಷಾ ತೀರದಲ್ಲಿ ಮದ್ದೂರು

೫ ಹೇಮಾವತಿ ತೀರದಲ್ಲಿ ಹೊಳೆನರಸಿಪುರ, ಗೋರೂರು

೬ ಕೃಷ್ಣಾತೀರದಲ್ಲಿ ಕೊಪ್ಪ ಇತ್ಯಾದಿ ಜಯ + ಮಂಗಳನದಿ ಹಾಗೂ ಶಿಂಷಾನದಿಗಳ ಉಗಮ ದೇವರಾಯನದುರ್ಗ ಪ್ರದೇಶದಲ್ಲಿದೆ

ಸಡಗರ ಸಂಭ್ರಮದಿಂದ ದೂರವಿರುವ ಬೆಟ್ಟದ ಮೂರ್ತಿಗಳು (ಮೇಲು ಕೋಟೆ, ಕರಿಗಿರಿ ಇತ್ಯಾದಿ) 'ಗಿರಿಜಾ' ಮೂರ್ತಿಗಳೆಂದು ಕರೆಯಲ್ಪಟ್ಟಿವೆ ಶಿಲ್ಪ ವಿನ್ಯಾಸದಲ್ಲಿ ಇವು 'ಭೂಮಿಜ' ಮೂರ್ತಿಗಳಿಗಿಂತ ಬೇರೆಯಾಗಿವೆ.

ಗ್ರಾಮಾಂತರ ಪ್ರದೇಶಗಳಲ್ಲಿ ಜನರು ಎಲ್ಲಾ ಹಿಂದೂ ದೈವಗಳನ್ನು ಸಮನಾಗಿ ಪೂಜಿಸುವರು ಇವುಗಳ ಪೈಕಿ ಊರಹೊರಗೆ ಆಂಜನೇಯ ಅಥವ ಮಾರಿಗುಡಿ, ಒಳಗೆ ಶಿವ / ವಿಷ್ಣು ದೇವಸ್ಥಾನಗಳು ಅದರಲ್ಲೂ ನೃಸಿಂಹದೇವರು ಎಂದರೆ ಭಯಸಮ್ಮಿತವಾದ ಭಕ್ತಿ ರೂಢಿ ನಿಯಮಗಳನ್ನು ಇವರಲ್ಲಿ ಕಾಣಬಹುದು. ಇಡಿ ಕರ್ನಾಟಕದಲ್ಲಿ ಹಲವಾರು ನೃಸಿಂಹಕ್ಷೇತ್ರಗಳ ಮೂರ್ತಿ ವಿಶೇಷವನ್ನು ತಿಳಿಯುವುದು ಅವಶ್ಯವೆನಿಸುತ್ತದೆ

೧. ಪರಶುರಾಮಕ್ಷೇತ್ರದ ಕಡೇ ಶಿವಾಲಯದಲ್ಲಿರುವ ಶ್ರೀ ಚಿಂತಾಮಣಿ ಗುರು ನೃಸಿಂಹನು ಎಡತೊಡೆಯನ್ನು ನೆಲಕ್ಕೆ ಊರಿ ಅದರಮೇಲೆ ಶಂಖಹಸ್ತವನ್ನಿಟ್ಟುಕೊಂಡು, ಬಲಮಂಡಿಯ ಮೇಲೆ ಬಲಹಸ್ತದಲ್ಲಿ ಸುದರ್ಶನ ಚಕ್ರವನ್ನು ಎತ್ತಿ ತೋರಿಸುವಂತೆ ವೀರಾಸನದಲ್ಲಿ ಕುಳಿತಿರುವನು ಹೀಗೆ ಸಂಘಟಿತವಾಗಿರುವ ಮೂರ್ತಿಯನ್ನು ಶ್ರೀ ಮದ್ಯೋಗಾನಂದ ಗುರುನರಸಿಂಹ ಪ್ರಸನ್ನ ಎಂದು ಸಂಬೋಧಿಸುವರು ಕಾರಂತ, ಹೊಳ್ಳ, ನಾವಡ ಹೆಬ್ಬಾರ ಪಂಗಡಗಳು ಸೇರಿದ ಕೋಟಿ ಜನಾಂಗದ ಕುಲದೇವರೇ ಆಗಿದ್ದಾನೆ ಗುರುನರಸಿಂಹ

೨ ಎಳಂದೂರು ತಾಲೂಕಿನ ಅಗರದ ಏಕಮೂರ್ತಿಯಲ್ಲಿ - ಅ) ಯೋಗ, ಆ) ವಕ್ಷಸ್ಥಳದಲ್ಲಿ ಲಕ್ಷ್ಮಿ ಇರುವುದರಿಂದ ಲಕ್ಷ್ಮೀನರಸಿಂಹ, ಇ) ಶಿವಿಯಬಳಿ ಜ್ವಾಲೋಪಾದಿಯ ಚಿತ್ರವಿರುವುದರಿಂದ ಜ್ವಾಲಾ ನೃಸಿಂಹ, ಈ) ಪಾದದ ಬಳಿ ಪ್ರಹ್ಲಾದನಿರುವುದರಿಂದ ಪ್ರಹ್ಲಾದ ನೃಸಿಂಹ, ಉ) 'ಯೋಗ್ಯಪಟ್ಟ ನಿಬದ್ಧಾಂಗಂ ತ್ರಿನೇತ್ರ ಚೋಗ್ರವಿಗ್ರಹಂ' ಎಂದು ಹಣೆಯಲ್ಲಿ ಕಣ್ಣಿರುವುದರಿಂದ ಉಗ್ರತ್ರಿನೇತ್ರ ನೃಸಿಂಹ ಪ್ರಗತಿ ಕ್ಷೀಣವಾದ ಕ್ಷೇತ್ರಗಳಲ್ಲಿ ಇದೂ ಒಂದು

೩ ಕರಿಗಿರಿಯ ಕುಂಭೀ ಬೆಟ್ಟದ ಯೋಗಲಕ್ಷ್ಮೀ ನೃಸಿಂಹನು ಬಾಯಿ ತೆರೆದಿರುವುದು ಸಾಲಿಗ್ರಾಮವೆಂದು ಭಾವಿಸಿ ಪೂಜಿಸುವರು

೪. ಶಿಬಿ ಕ್ಷೇತ್ರದಲ್ಲಿ ಮೂಲಮೂರ್ತಿ ಇಲ್ಲ. ದೊಡ್ಡದಾದ ಸಾಲಿಗ್ರಾಮಕ್ಕೆ ಪೂಜೆ

೫ ಮೇಲುಕೋಟೆ ಯೋಗನೃಸಿಂಹ ಸಂಪೂರ್ಣವಾಗಿ ಸಾಲಿಗ್ರಾಮ ಮೂರ್ತಿ, ಗುಂಡಾದ ಚಕ್ರಕಲೆಗಳನ್ನು ಗುರುತಿಸಬಹುದು ೩೨ ನೃಸಿಂಹ ರೂಪಗಳಲ್ಲಿ ಯೋಗರೂಪವೂ ಒಂದು 'ಯೋಗೋ ಯೋಗವಿದಾಂ' ಎಂದು ಜೀವಾತ್ಮ ಪರಮಾತ್ಮ ಸಂಯೋಗವನ್ನು ಯೋಗಭೋಗ ಎಂಬ ಪದಗಳು ಭಗವಂತನ ಉಭಯವಿಭೂತಿಗಳನ್ನು ಸೂಚಿಸುವುವು. ಈ ರೂಪದಲ್ಲಿ ಪ್ರಹ್ಲಾದ ಪರಿಪಾಲನೆಗಾಗಿ ಕ್ಷೀರಸಾಗರದಲ್ಲಿ ಭಗವಂತ. ಸಮಯ ನಿರೀಕ್ಷೆ

ಸುತ್ತಿದ್ದ ಎಂದು ನೃಸಿಂಹ ತಾಪನೀಯೋಪನಿಷತ್ ನಲ್ಲಿ ಹೇಳಿದೆ "ಈ ರೂಪ ಮನಮೋಹಕವಾದ್ದು ಯೋಗಾಭ್ಯಾಸ ಮಾಡುವವರಿಗೆ ಶಿಕ್ಷಣ ರೂಪ ದಲ್ಲಿ ಹೀಗೆ ಸಂಭಾವಿಸಿದ್ದಾನೆ. 'ಯೋಗಂ ನಿಜಂ ಶಿಕ್ಷಯನ್' ಎಂದು ತೂಪ್ಪುಲ್ ಅಮ್ಮಾಸ್ ಕಾಮಾಸಿ ಕಾಪ್ಪಕಂ ಕೃತಿಯಲ್ಲಿ ವರ್ಣಿಸಿರುತ್ತಾರೆ ತೊರವೆಯ ನೃಸಿಂಹನೂ ಸಾಲಗ್ರಾಮ ಮೂರ್ತಿ

೬. ರಾಯಚೂರ್ ಜಿಲ್ಲೆಯ ಕೊಪ್ಪ ನೃಸಿಂಹನು ಅಶ್ವತ್ಥ ವೃಕ್ಷದಲ್ಲಿದ್ದಾನೆ

೭. ಕಾಶಿಗಿಂತ ಒಂದು ಗುಲಗಂಜಿ ತೂಕ ಹೆಚ್ಚು ಎಂಬ ಪುರಾಣ ಐತಿಹ್ಯ ಹೊಂದಿರುವ ಭಾಸ್ಕರ ಕ್ಷೇತ್ರ ವಾದ ಟಿ. ನರಸೀಪುರದ ಗುಂಜಾ ನೃಸಿಂಹಮೂರ್ತಿ ವೈಶಿಷ್ಟ್ಯ ಪೂರ್ಣವಾಗಿದೆ. ಎರಡೂ ಕ್ಷೇತ್ರದ ಸಾಮ್ಯ ಸ್ವಾರಸ್ಯವಾಗಿದೆ ಅದು ಹೀಗೆ-

**ಉತ್ತರ ಕಾಶಿ :**

೧ ಬಿಂದು ಮಾಧವ - ವಿಶ್ವನಾಥ

೨. ಸಂಗಮ - ಗಂಗ, ಯಮುನ, ಸರಸ್ವತಿ

೩. ವಟವೃಕ್ಷ

**ದಕ್ಷಿಣ ಕಾಶಿ :**

ಗುಂಜಾ ನೃಸಿಂಹ - ಅಗಸ್ತ್ಯೇಶ್ವರ

ಕಾವೇರಿ, ಕಪಿಲ, ಸ್ಫಟಿಕ ಸರೋವರ

ಬ್ರಹ್ಮಾಶ್ವತ್ಥ ವೃಕ್ಷ

ಪ್ರತಿಯೊಂದು ನೃಸಿಂಹಕ್ಷೇತ್ರಕ್ಕೂ ತನ್ನದೇ ಆದ ಸ್ಥಳಪುರಾಣವಿದೆ ಪ್ರತ್ಯಕ್ಷವಾಗಿ ಅಥವ ಪರೋಕ್ಷವಾಗಿ ರಾಜಾಶ್ರಯವೂ ಇತ್ತು ಟಿಪ್ಪುಸುಲ್ತಾನ್ ಹಾಗೂ ಮೈಸೂರು ಅರಸರ ಪುರಸ್ಕಾರ ದಿಂದ ಮೇಲು ಕೋಟೆ ಹಾಗೂ ಶ್ರೀರಂಗಪಟ್ಟಣದ ನೃಸಿಂಹದೇವಸ್ಥಾನಗಳೂ ರಾಜದೇವಸ್ಥಾನಗ ಳೆಂದು ಬೆಳೆದು ಬಂದಿರುತ್ತೆ. ಬಿಜಾಪುರದ ಸುಲ್ತಾನರಿಗೂ ತೊರವೆ ಮತ್ತು ಸರಸೋಬನ ದೇವಸ್ಥಾನಗಳಿಗೂ ನಂಟಿದೆ. ದೊಡ್ಡ ಬಂಡೆಯಲ್ಲಿ ಕೆತ್ತಲ್ಪಟ್ಟ ಸಾವನದುರ್ಗದ ನರಸಿಂಹ ಹಾಗೂ ಕ್ಷೇತ್ರ ವನ್ನು ನಿರ್ಮಿಸಿದವನು ಸಾವನೆ ಮಹಾರಾಜ ಸಿಂಹ. ಸ್ವಪ್ನ ಪ್ರಸಂಗದಿಂದ ಟಿಪ್ಪು ಸುಲ್ತಾನಿಂದ ಮೇಲು ಕೋಟೆ ಯೋಗಾ ನೃಸಿಂಹ ದೇವಸ್ಥಾನಕ್ಕೆ ಪುರಸ್ಕಾರ ದೊರೆಯಿತು. ಅಲ್ಲಿರುವ ನೌಬತ್ ನಗಾರಿಯ ಮೇಲೆ ಶಾಸನ ಒಂದರಲ್ಲಿ ಈ ವಿಷಯ ಉಕ್ತವಾಗಿದೆ 'ಭಯನಾಶನಃ' ಎಂಬಂತೆ ಭಯಭೀತಿ ನಿವಾರಣೆ ಮಾಡುವಲ್ಲಿ, ವಾಮಾಚಾರ ತಡೆಗಟ್ಟು ವಲ್ಲಿ ಹಾಗೂ ವರಮಾನ ದೃಷ್ಟಿಯಿಂದ ನೃಸಿಂಹ ಕ್ಷೇತ್ರಗಳು ಅದರಲ್ಲೂ ಯೋಗನರಸಿಂಹ ಮೂರ್ತಿ ಪ್ರಮುಖ ಪಾತ್ರ ವಹಿಸಿದೆ.

ಭವಿಷ್ಯಾಚಾರ್ಯರೆಂದು ಪ್ರಸಿದ್ಧಿಯಾದ ಭಗವ ದ್ರಾಮಾನುಜರ ಪಾದಾರ್ಪಣೆಯಿಂದಾಗಿ ಇಡಿಕರ್ನಾಟಕಕ್ಕೇ ಭಾಗ್ಯೋದಯವಾಗಿ ಭಕ್ತಕೋಟಿಯ ಮೇಲೆ ವಿಶೇಷ ಪ್ರಭಾವ ಬೀರಿತು. ರಾಮಾನುಜ ರಿಗೂ ಯೋಗಾ ನೃಸಿಂಹನಿಗೂ ನಿಕಟ ಸಂಪರ್ಕ ವಿದ್ದಂತೆ ಭಾವನೆ ಮೂಡುವುದು. ೧. ತೊಂಡ ನೂರಿನ ಯೋಗಾ ನೃಸಿಂಹ ಸನ್ನಿಧಿಯಲ್ಲಿ ಜೈನ ಪಂಡಿತನೊಬ್ಬನನ್ನು ವಾದದಲ್ಲಿ ಸೋಲಿಸಿದರು. ೨. ಇವರು ಭೇಟಿಕೊಟ್ಟ ಮಿರ್ತಿ ಸಾಲಗ್ರಾಮ ,ಮೇಲು ಕೋಟೆಗಳಲ್ಲಿ ಯೋಗ ಮೂರ್ತಿಗಳಿರುವುದು ಗಮ ನಾರ್ಹ. ಅಷ್ಟೇ ಅಲ್ಲ. 'ತಿರುಕ್ಕುಲತ್ತಾರ್' ಪ್ರಸಂ ಗಗಳು ಮೇಲುಕೋಟೆ ಕ್ಷೇತ್ರದೊಂದಿಗೆ ಇನ್ನೂ ಮೂರು ಕ್ಷೇತ್ರಗಳಲ್ಲಿ ಸಾಂಪ್ರದಾಯಿಕವಾಗಿ ಬಂದಿ ರುತ್ತೆ. ಕರಿಗಿರಿ ಕ್ಷೇತ್ರದಲ್ಲಿ ರಥೋತ್ಸವದಲ್ಲಿ ಹರಿಜ ನರು ಭಾಗವಹಿಸುವರು ಟಿ. ನರಸೀಪುರದಲ್ಲಿ ಉತ್ಸವಮೂರ್ತಿ ಸಕಾಲಕ್ಕೆ ತೇರನ್ನೇರುವುದು. ಆದರೆ ರಥ ಚಲಿಸದೇಕಾದರೆ ಹಲವಾರು ಗಂಟೆಗಳ ಕಾಲ ದೇಕಾಗುವುದು. ಇದಕ್ಕೆ ಕಾರಣ - ಸುತ್ತ ಮುತ್ತ ಇರುವ ಹರಿಜನರು ಹಿಂದಿನಿಂದಲು ನಡೆ ಸಿಕೊಂಡು ಬಂದಿರುವ ಸಂಪ್ರದಾಯ.

೧) ಶಿರಸ್ತೆದಾರರು ಹಾಗೂ ನರಸೀಪುರದ ಹರಿ ಜನರ ತಂಡ ಎರಡು ಸೇರು ಅಡಿಕೆ ಒಂದುಕಟ್ಟು ವೀಳೆದೆಲೆ ಸಮೇತ ಸೋಸಲೆಗೆ ಹೋಗಿ ಅಲ್ಲಿಯ ಹರಿಜನರನ್ನು ಆಹ್ವಾನಿಸುವರು. ೨) ಸೋಸಲೆ ಯಿಂದ ಬಂದವರಲ್ಲಿ ಒಂದು ತಂಡ ಆಲೂರಿಗೆ ಹೋಗಿ ಅಲ್ಲಿಯ ಹರಿಜನರನ್ನು ಆಹ್ವಾನಿಸುವುದು. ೩)ಇವರು ಬಂದ ನಂತರ ಮತ್ತೊಂದು ತಂಡ ಮಾದೇಪುರದವರನ್ನು ಆಹ್ವಾನಿಸಿ ಈ ಎಲ್ಲರೂ ಸೇರಿ ರಥವನ್ನು ಚಲಿಸುವರು ಈ ಪ್ರಕ್ರಿಯೆ ಇವರ ಶ್ರದ್ಧಾಭಕ್ತಿಯನ್ನೇ ಸೂಚಿಸುವುದು.

ಕುಂಟನ ಬೆಳತೂರಿನಲ್ಲಿ ಹರಿಜನ ಹಾಗೂ ಇತರ ಪಂಗಡಗಳಿಗೆ ನಿರ್ಧಿಷ್ಟವಾದ ಕಾರ್ಯಭಾರ ಇರುವುದು. ಎಲ್ಲರೂ ಶ್ರದ್ಧೆಯಿಂದ ಕೆಲಸ ಮಾಡು ವರು. ಇವರಿಂದ ಬಂದ ಕಾಣಿಕೆಯನ್ನು 'ವರಿ' ಎಂದು ಕರೆಯುವರು

ಇನ್ನು ಕಲೆಯ ಬಗ್ಗೆ ಹೇಳುವುದಾದರೆ ನುಗ್ಗೇ ಹಳ್ಳಿ, ಮಾರೇಹಳ್ಳಿ, ಬಗ್ಗವಳ್ಳಿಗಳಲ್ಲಿ ಉತ್ತಮ ಹೊಯ್ಸಳ, ಚೋಳ ಕಲಾಕೃತಿಯನ್ನು ನೋಡಬ ಹುದು. ರಾಮಾಯಣ, ಭಾರತ, ಭಾಗವತದ ವಿರಾಟ್‌ಲೀಲೆಗಳನ್ನು ಸೂಚಿಸುವ ತೈಲಚಿತ್ರಗಳನ್ನು ಶಿಬಿ ಕ್ಷೇತ್ರದಲ್ಲಿ ನೋಡಬಹುದು ಆದರೆ ಇವುಗಳ ಪರಿ ಪಾಲನೆ ಕಾರ್ಯ ಕುಂಠಿತವಾಗಿರುವುದನ್ನು ಕಾಣಬ ಹುದು

ನೃಸಿಂಹದೇವರು ಕೇವಲ ಐಯ್ಯಂಗಾರರ ದೇವ ರಲ್ಲ. ದೇವರಾಯನದುರ್ಗ, ಶಿಬಿ, ತೊರವೆ, ದಾಳವಟ್ಟ, ಟಿ ನರಸೀಪುರದ ದೇವರು ಅಬ್ರಾಹ್ಮಣ ಹಾಗೂ ಅಸಂಖ್ಯಾತ ಬ್ರಾಹ್ಮಣರಿಗೂ ಮನೆದೇವ ರಾಗಿದ್ದಾನೆ. ಸುಬ್ರಹ್ಮಣ್ಯ ಒಕ್ಕಾಲಿನವರು ನೃಸಿಂ ಹನನ್ನು ಮನೆದೇವರಾಗಿ ಪೂಜಿಸುವರು. ಕುಕ್ಕೆ (ಸುಳ್ಯತಾಲೂಕು) ಮತ್ತು ಘಾಟಿ (ದೊಡ್ಡ ಬಳ್ಳಾ ಪುರದ ಸಮೀಪ) ಕ್ಷೇತ್ರಗಳಲ್ಲಿ ಸುದರ್ಶನ ನೃಸಿಂಹ ಮೂರ್ತಿಯಂತೆ ಮುಂಭಾಗ ಸುಬ್ರಹ್ಮಣ್ಯ ಹಿಂಭಾಗ ನೃಸಿಂಹಮೂರ್ತಿ ಸಂಘಟಿತವಾಗಿರುತ್ತೆ. ನೃಸಿಂ ಹನನ್ನು ದರ್ಶನ ಮಾಡಲು ಕನ್ನಡಿ ಇಟ್ಟಿರುವರು. ನೃಸಿಂಹ, ಮೂಲರಾಮ ಹಾಗೂ ಪ್ರಾಣದೇವರು ಇಡಿ ಮಾಧ್ವಕುಲದ ಪ್ರಧಾನ ದೇವತೆಗಳಾ ಗಿವೆ. ವಾದಿರಾಜರು ಪೂಜಿಸುತ್ತಿದ್ದ ವ್ಯಾಸರಾಯರ ಸಂಪುಟ ಸಾಲಿಗ್ರಾಮ ಇಂದು ಕುಕ್ಕೆ ಸುಬ್ರಹ್ಮಣ್ಯದ ಪಕ್ಕದಲ್ಲೇ ಸಂಪುಟ ನೃಸಿಂಹ ಎಂದು ಪೂಜಿಸಲ್ಪ ಡುತ್ತಿದೆ ಮನೆಗಳಲ್ಲಿ ನೃಸಿಂಹ ವಿಗ್ರಹ ಆರಾಧನೆ ತುಂಬಾ ವಿರಳ.

ಮುಜರಾಯಿ ಇಲಾಖೆಗೆ ಸೇರಿದ ನೃಸಿಂಹಕ್ಷೇತ್ರ ಗಳು ಹೆಚ್ಚಾಗಿವೆ. ಹಳೆ ಮೈಸೂರು ರಾಜ್ಯದಲ್ಲಿರುವ ಕ್ಷೇತ್ರಗಳು ಮಾತ್ರ. ಕರ್ನಾಟಕ ಪ್ರದೇಶದ ನೃಸಿಂಹ ಕ್ಷೇತ್ರಗಳು ಇದರಲ್ಲಿ ಸೇರಿಲ್ಲ. ದಕ್ಷಿಣ ಕನ್ನಡ ಹಾಗೂ ಗಡಿಪ್ರದೇಶದ ಹಲವುಕ್ಷೇತ್ರಗಳು ಇನ್ನೂ ಹಳೆ ಮದ ರಾಸ್ ಪ್ರಾಂತ್ಯದ ಕಾಯ್ದೆಗಳಿಗೆ ಒಳಪಟ್ಟಿವೆ. ಬಿಜಾ ಪುರ, ಉತ್ತರಕನ್ನಡ, ಧಾರವಾಡ ಬೆಳಗಾಂ ನೃಸಿಂ ಹಕ್ಷೇತ್ರಗಳು ಇಂದಿಗೂ ಹಳೆಯ ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯ್ದೆಗೆ ಒಳಪಟ್ಟಿರುತ್ತೆ. ಈ ಕಾಯ್ದೆಗಳಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಅಗೋಚರ ಸ್ಥಳಗಳಲ್ಲಿರುವ ಕ್ಷೇತ್ರಗಳಿಗೆ ಸರ್ಕಾರದ ಅನುದಾನ ವಾಗಲಿ ದೇಠಾವ ಧನಪೋಷಣೆಯಾಗಲಿ ಇರುವು ದಿಲ್ಲ. ಅರ್ಚಕ ಕ್ಷೇಮಾಭಾವದ ಸಮಸ್ಯೆ ಈ ಬಡ ಕ್ಷೇತ್ರಗಳಲ್ಲಿ ತೀವ್ರವಾಗಿರುತ್ತೆ. ಮುಜರಾಯಿ ಅಧೀ ನದಲ್ಲಿರುವ ಕ್ಷೇತ್ರಗಳು, ಬಂದ ವರಮಾನದಲ್ಲಿ ವರ್ಷಪೂರ್ತಿ ತಗಲುವ ಖರ್ಚನ್ನು ಪಾಲನೆ ವೆಚ್ಚ ವನ್ನು ಕಳೆದು ಉಳಿದದ್ದನ್ನು ಸರ್ಕಾರಕ್ಕೆ ಜಮಮಾಡ ಬೇಕು. ಈ ವ್ಯವಸ್ಥೆ ತುಂಬಾ ಹಳೆಯದು. ಯೋಜ ನಾಧಾರಿತವಾದ ಅನುದಾನವಾಗಲಿ, ಅಥವ ಸಹಾ ಯಧನವಾಗಲಿ ಇರುವುದಿಲ್ಲ. ಭಕ್ತಾದಿಗಳ ಸಮು ದಾಯದಿಂದ ಸೃಷ್ಟಿಗೊಂಡ ವಿಶ್ವಸ್ಥ ಮಂಡಳಿ ವತಿ ಯಿಂದ ನಡೆಯುವ ನೃಸಿಂಹಕ್ಷೇತ್ರಗಳಲ್ಲಿ

ಅಭಿವೃದ್ಧಿ ಸಾಧನೆಗಳನ್ನು ನೋಡಬಹುದು. ಈ ಮಂಡಲಿಯಲ್ಲಿ ಮುಜರಾಯಿ ಇಲಾಖೆಯಿಂದ ಎಕ್ಸ್ ಅಫಿಷಿಯೊ ಪ್ರಾತಿನಿಧ್ಯವಿದೆ.

* * *

# ಶ್ರೀನಿವಾಸಸ್ತವ

- ಭ್ರಮರ ಗೋಪೀನಾಥ್.



ರಾಗ : ಮಧ್ಯಮಾವತಿ

ತಿರುಮಲೇಶ ಭಕ್ತ ಪೋಷ
ಕರುಣೆಸುತಿಹೆ ಶ್ರೀನಿವಾಸ
ಪುರುಷೋತ್ತಮ ಕಮಲೇಶ
ಸದ್ಗುರು ಕೃಪಾ ವಿಶೇಷ

ವರಾಹ ರೂಪ ವಾಸವಸುತ
ವರ ಅಭಯ ಸುರನರ ಸಸ್ತುತ
ವರ ಮಹಾ ಲಕುಮಿ ಸೇವಿತ
ವರದ ವೇಂಕಟ ಕಾಮಿತದಾತ

ಶಂಖ ಚಕ್ರ ಗದ ಪದ್ಮಧಾರಿ
ವೆಂಕಟರಮಣ ಮುಕುಂದ ಶ್ರೀಹರಿ
ಸಂಕಟ ಹರಣ ದೈತ್ಯ ಸಂಹಾರಿ
ಪಂಕಜ ಲೋಚನ ಭಕ್ತ ಕೈವಾರಿ

ಗೋವಿಂದ ಗೋಪಾಲ ಗೋವರ್ಧನಧಾರಿ
ಮುಕಂದ ವಾಸವ ಮೋಹನ ಹರಿ
ಕೇಶವ ನಾರಣ ಮಾಧವ ಶೌರಿ
ಕೇಶವ ಭಗಿನಿ ಮನದಿ ಲಹರಿ

ರಾಗ : ಸಿಂಧುಭೈರವಿ

ಬನ್ನಿ ಬನ್ನಿ ಬೆಟ್ಟಕೆ ಬನ್ನಿ
ಎನ್ನಿ ಎನ್ನಿ ಗೋವಿಂದ ಎನ್ನಿ
ಚೆನ್ನ ಎನ್ನ ಭಕ್ತರ ಹರಕೆ
ತನ್ನಿ ತನ್ನಿ ಭಕ್ತಿಯ ಕಾಣಿಕೆ

ಬೆಟ್ಟಕ್ಕೆ ಏರುವಾಗ ಬೆಟ್ಟದೊಡೆಯನ ನೋಡಿ
ಇಷ್ಟದೇವನ ನೆನೆದು ದುರಿತವ ದೂಡಿ
ಕಷ್ಟವ ಹರಿಸುವ ರಮಣನ ಕೂಡಿ
ತಟ್ಟುತ್ತಾ ತಾಳ ಗೋವಿಂದನ ಕಡೆ ಗೋಡಿ

ಬಂಗಾರ ಗೋಪುರ ಕಾಣ್ತಿದೆ ನೋಡಿ
ಶೃಂಗಾರ ಶ್ರೀಶಗೆ ನಮಸ್ಕಾರ ಮಾಡಿ
ಓಂಕಾರಗೆ ಅರ್ಚನೆ ಆರತಿ ಮಾಡಿ
ಅಲಂಕಾರ ಅಲಮೇಲು ಅಮ್ಮನ ಕೊಂಡಾಡಿ

ಕೇಶವ ಮಾಧವ ಶ್ರೀಧರ ಮಾಧವ
ಗೋವಿಂದ ಆನಂದ ಸಚ್ಚಿದಾನಂದ
ತಿರುಮಲೆ ತಿರುಪತಿ ತಿರುವೆಂಕಟೇಶ
ಕೇಶವ ಭಗಿನಿಯ ಕುಲದೈವ ಶ್ರೀಶ

ರಾಗ : ಸಾರಂಗ್

ಆನಂದ ಸ್ಮರಣಾ ವೆಂಕಟರಮಣ
ಭಕ್ತರ ಮೇಲೆ ನಿನ್ನಯ ಕರುಣ

ಸಿಂಗರಿಸಿದೆ ವಿವಿಧ ಆಭರಣ
ಸ್ಮರಿಸುವೆ ನಿನ್ನಯ ಶ್ರೀಚರಣ
ಹರಿ ಹರಿ ನೀನೆ ಎಲ್ಲರ ತ್ರಾಣ
ಪೊರೆಯುತ್ತಿರುವೆ ಭಕ್ತರ ಪ್ರಾಣಾ

ನಿನ್ನ ಕೃಪೆಗೆ ಭಕ್ತಿಯೆ ಕಾರಣ
ನಿನ್ನವನಾಗಿಸೋ ಸಿರಿರಮಣ
ಘನ್ನ ಶ್ರೀನಿವಾಸ ಭಕ್ತ ಪರಾಯಣ
ಪುಣ್ಯದಿ ಪಾಡುವೆ ನೀಡೋ ಸ್ಮರಣ

ಪತಿತ ಪಾವನ ನಿನ್ನನು ಚರಣ
ಪಥದಿಂದ ನಿನ್ನ ವೈಕುಂಠದಿ ತಾಣ
ಜಗತ್ ರಕ್ಷಕ ನೀನೆ ವೆಂಕಟರಮಣ
ಪತಿಯು ನೀನೆ ಪದ್ಮಾವತಿ ಭೂಷಣ

ಕರುಣಾಕರನೆ ದುರಿತ ಹರಣ
ಕರುಣೆಸಿ ನುಡಿಸಿದೆ ನಿನ್ನ ಕಲ್ಯಾಣ
ಶಿರಬಾಗಿ ನಮಿಸುವೆ ಶ್ರೀಚರಣ
ವರ ಕೇಶವ ಭಗಿನಿ ಮನದಿ ಭಕ್ತಿಯ ಕಿರಣ



# ಗೋಪಾಲದಾಸರು

- ಜಿ. ಶ್ರೀಧರ್.

ಶ್ರೀಪಾದರಾಜರಿಂದ ಸ್ಥಾಪಿತವಾದ ದಾಸ ಸಾಹಿತ್ಯ ವೃಕ್ಷವು ವ್ಯಾಸರಾಯರಿಂದ ಹಾಗೂ ವಾದಿ ರಾಜರಿಂದ ಹಸಿರಾಗಿ ಕಂಗೊಳಿಸಿತು ವಿಜಯನ ಗರ ಸಾಮ್ರಾಜ್ಯದ ಅವನತಿಯ ನಂತರ ಕೆಲ ವರ್ಷ ಕಾಲ ಅಜ್ಞಾತದಲ್ಲಿದ್ದ ದಾಸಸಾಹಿತ್ಯವು ಮತ್ತೊಮ್ಮೆ ಮಂತ್ರಾಲಯ ರಾಘವೇಂದ್ರ ತೀರ್ಥರ ನೇತೃತ್ವ ದಲ್ಲಿ ಪುನರುಜ್ಜೀವನಗೊಂಡಿತು. ರಾಘವೇಂದ್ರ ತೀರ್ಥರ ಪ್ರೇರಣೆಯಿಂದ, ಪ್ರೋತ್ಸಾಹದಿಂದ ವಿಜ ಯದಾಸರು, ಗೋಪಾಲದಾಸರು ಹಾಗೂ ಜಗನ್ನಾ ಥದಾಸವರೇಣ್ಯರು ಪ್ರಬುದ್ಧವಾಗಿ ಕೀರ್ತನೆಗಳನ್ನು ರಚಿಸುವ ಮೂಲಕ ಶ್ರೀಪಾದರಾಜರಿಂದ - ಜಗ ನ್ನಾಥದಾಸರವರೆಗೆ ಆವಿರ್ಭಾವವಾದ ದಾಸಸಾಹಿ ತ್ಯಮುಂದುವರೆಯಿತೆಂದು ತಿಳಿದು ಬರುತ್ತದೆ.

ಆಧ್ಯಾತ್ಮಿಕ ಜಗತ್ತಿನ ದಾಹವನ್ನು ದಾಸಸಾಹಿತ್ಯ ಜಲದಿಂದ ತಣಿಸಿದವರು ಗೋಪಾಲದಾಸರು ಕರ್ನಾಟಕದ ದಾಸಸಾಹಿತ್ಯದ ತೊಟ್ಟಿಲು ಎಂದೆ ನಿಸಿರುವ ರಾಯಚೂರು ಜಿಲ್ಲೆಯ ದೇವ ದುರ್ಗ ತಾಲ್ಲೂಕಿನ ಮಸರುಕಲ್ಲಿನಲ್ಲಿ ಮುರಾರಿ ವೆಂಕಮ್ಮ ದಂಪತಿಗಳ ಹಿರಿಯ ಪುತ್ರನಾಗಿ ಜನಿಸಿದ ಗೋಪಾ ಲದಾಸರ ಮೊದಲ ಹೆಸರು ಭಾಗಣ್ಣ ಆದುದರಿಂ ದಲೇ ಭಕ್ತಿಯ ಭಾಗಣ್ಣ ಎಂದೇ ಪ್ರಖ್ಯಾತಿಗೆ ಬಂದ ವರು ಈ ಗೋಪಾಲದಾಸರು

ವಿಜಯದಾಸರಲ್ಲಿ ಶಿಷ್ಯತ್ವ ಪಡೆದ ಭಾಗಣ್ಣ ನವರು, ಗೋಪಾಲವಿಠಲದ ಅಂಕಿತ ನಾಮ ದಿಂದ ಗೋಪಾಲದಾಸರೆಂಬ ಹೆಸರಿನಿಂದ ಕೀರ್ತ ನೆಗಳನ್ನು ರಚಿಸಿ ಆಧ್ಯಾತ್ಮಿಕ ಪ್ರತಿಭೆಯನ್ನು ಬೆಳಗಿ ದರು ಗೋಪಾಲದಾಸರು ತಮ್ಮ ತಮ್ಮಂದಿರನ್ನು ಈ ವೈರಾಗ್ಯದ ಕಡೆಗೆ ಸೆಳೆದು, ಸೀನಪ್ಪ ದಾಸರಿಗೆ - ವರದಗೋಪಾಲ, ದಾಸಪ್ಪದಾಸರಿಗೆ - ಗುರುಗೋ ಪಾಲ ವಿಠಲ, ರಂಗಪ್ಪದಾಸರಿಗೆ - ತಂದೆ ಗೋಪಾಲ ವಿಠಲ ಎಂಬ ಅಂಕಿತ ನಾಮಗಳನ್ನು ನೀಡಿ, ಕೀರ್ತ ನೆಗಳನ್ನು ರಚಿಸಲು ಪ್ರೋತ್ಸಾಹಿಸಿದರು

ಒಮ್ಮೆ ಉತ್ತರಾಧಿಮಠದ ಯತಿವರ್ಯರಾದ ಸತ್ಯಬೋಧ ತೀರ್ಥರು, ಈ ಸಹೋದರರನ್ನು ಇವರ ಅಪರೋಕ್ಷ ಜ್ಞಾನವನ್ನು ಪರೀಕ್ಷಿಸಲು, ನಾಲ್ವ ರನ್ನು ಪ್ರತ್ಯೇಕ ಕೊಠಡಿಗಳಲ್ಲಿ ಕೂರಿಸಿ ಕೃತಿ ರಚಿ ಸಲು ಆಜ್ಞಾಪಿಸಿದರು ಯತಿವರ್ಯರಲ್ಲಿ ಗುರು ಪ್ರೇಮವನ್ನು ಹೊಂದಿದ್ದ ಈ ದಾಸರುಗಳು ಕೀರ್ತ ನೆಯನ್ನು ರಚಿಸಿ, ಸತ್ಯಬೋಧ ತೀರ್ಥರ ಪ್ರೀತ್ಯಾದರ ಗಳಿಗೆ ಪಾತ್ರರಾದರು

ಮಾರಮಘನ ಸಮೀರ ಮಧ್ವಮತೋ
ದ್ಧಾರ ಶುಭಗುಣ ಸಾಗರ ಧೀರ



ಗುರು ಸತ್ಯಬೋಧಾರ್ಯ ಹರಿಕರುಣದಲಿ
ಪರವರ್ಗನ ಗೆಲಿದು ಧಾರುಣಿಯೊಳು ಮೆರೆದ

ಮನಸಿಜನು (ಮನ್ಮಥನು) ಈ ಯತಿವರ್ಯರ ಮಹಿಮೆಯನ್ನು ಕೇಳಿ ಅರಸಿ ಬಂದಾಗಲು ಮೋಹಾದಿಗಳಿಗೆ ಮನಸೋಲದೆ ಗುರುಕರುಣದ ದೃಢ ಕವಚದಿಂದ ಮನೋಜಯಹೊಂದಿದ ಬಗ್ಗೆ ಉಲ್ಲೇಖಿಸಿದ್ದಾರೆ

ಸತ್ಯಬೋಧರ ಅಸಾಧಾರಣ ಪಾಂಡಿತ್ಯವನ್ನು, ಯತಿ ಧರ್ಮವನ್ನು ಸ್ಮರಿಸಿ, ಅಷ್ಟಾಂಗ ಯೋಗ ಸಾಧನ ಬಲದಿಂದ ವಿಜೃಂಭಿಸುವ ಬಗ್ಗೆ ಸಹ ಪ್ರಸ್ತಾ ಪಿಸಿ, "ತಮ್ಮ ಚಾರು ಚರಣಕೆ ನಮಿಪೆ" ಎಂದು ಹಾಡಿದ್ದಾರೆ

ಪ್ರತಿ ಭಾರಿಯೂ ತಿರುಪತಿಯಲ್ಲಿ ನಡೆಯುವ ಬ್ರಹ್ಮೋತ್ಸವಕ್ಕೆ ಹೊರಟ ಗೋಪಾಲದಾಸರೊಂ ದಿಗೆ, ವಿಜಯದಾಸರಿಂದ ಪರಿಚಿತರಾದ ಶ್ರೀನಿವಾ ಸಾಚಾರ್ಯರು ಬಂದರು ಕಾಲ್ನಡಿಗೆಯಲ್ಲಿ ತಿರುಮ ಲವನ್ನು ಹತ್ತಿದಾಗ, ಆಯಾಸದಿಂದ ಬಳಲಿ, ಶ್ರೀನಿ ವಾಸಾಚಾರ್ಯರ ಸ್ಥಿತಿಯು ಅಯೋಮಯವೆನಿ ಸಿತು ಸಾಯುವ ಸ್ಥಿತಿಯಲ್ಲಿದ್ದ ಶ್ರೀನಿವಾಸಾಚಾರ್ಯ ರನ್ನು ಕಂಡು, ಗೋಪಾಲದಾಸರು ಭಯ ಪಟ್ಟರು ಧನ್ವಂತ್ರಿ ಸ್ತೋತ್ರ ಮಾಡಿದರು.

ಎನ್ನ ಭಿನ್ನಪ ಕೇಳು ಧನ್ವಂತ್ರಿ
ದಯಮಾಡು ಸಣ್ಣವನು ಇವ ಕೇವಲ
ಬನ್ನ ಬಡಿಸುವ ರೋಗವನು ಮೋಚನೆ
ಮಾಡಿ ಚೆನ್ನಾಗಿ ಪಾಲಿಸುವುದು ಕರುಣೆ

ಆರೋಗ್ಯ ಆಯುಷ್ಯ ಐಶ್ವರ್ಯ ಎಂಬುವುದು ಶ್ರೀಮನ್ನಾರಾಯಣನನ್ನು ಭಜಿಸುವರ ಸಾಧನಗಳು ಎಂದು ವಿವರಿಸಿದ ಅವರು, ಗುಣಪೂರ್ಣನಾದ

### ತಿ. ತಿ. ದೇವಸ್ಥಾನಗಳು - ತಿರುಪತಿ.

# ಕಲ್ಯಾಣ ಮಂಟಪಗಳ ಬಾಡಿಗೆ ಪರಿಷ್ಕರಣ

ಬೇರೆ ಬೇರೆ ಕಡೆಗಳಲ್ಲಿರುವ ತಿ.ತಿ ದೇ. ಕಲ್ಯಾಣ ಮಂಟಪಗಳ ದಿನಂಪ್ರತಿ ಬಾಡಿಗೆಯನ್ನು 1-6-99 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ. ಮಿಕ್ಕ ಎಲ್ಲ ಬಾಡಿಗೆಯ ನಿಯಮಗಳೂ ಎಂದಿನಂತೆಯೇ ಇರುವುವು. ಈ ಪರಿಷ್ಕೃತ ದರಗಳಲ್ಲಿ ಜನರೇಟರ್ ಬಾಡಿಗೆಯೂ ಸೇರಿದೆಯಾಗಿ ಜನರೇಟರಿನ ಬಾಡಿಗೆಯನ್ನು ಪ್ರತ್ಯೇಕವಾಗಿ ನೀಡಬೇಕಾಗಿರುವುದಿಲ್ಲ. ಪರಿಷ್ಕೃತ ಬಾಡಿಗೆ ದರಗಳನ್ನು ಕೆಳಗೆ ನೀಡಲಾಗಿದೆ.

| ಸಂ. | ಕಲ್ಯಾಣಮಂಟಪದ ಹೆಸರು - ಸ್ಥಳ | ವಿಭಾಗಗಳು | ಪ್ರತಿ ವಿಭಾಗದ ದಿನಂಪ್ರತಿ ಬಾಡಿಗೆ |
|---|---|---|---|
| 1. | ಶ್ರೀನಿವಾಸ ಕಲ್ಯಾಣಮಂಟಪ, ತಿರುಚಾನೂರು ರಸ್ತೆ, ತಿರುಪತಿ. | 1, 2,<br>3, 4, | ರೂ 5000/-<br>ರೂ. 6000/- |
| 2. | ಶ್ರೀ ಪದ್ಮಾವತೀ ಕಲ್ಯಾಣಮಂಟಪ, ತಿರುಚಾನೂರು ರಸ್ತೆ, ತಿರುಪತಿ | 1 ರಿಂದ 3 | ರೂ 6000/- |
| 3. | ತೋಳಪ್ಪ ಉದ್ಯಾನವನದ ಕಲ್ಯಾಣಮಂಟಪಗಳು, ತಿರುಚಾನೂರು | 1 ರಿಂದ 8 | ರೂ. 1000/- |
| 4. | ಬಯಲು ಕಲ್ಯಾಣಮಂಟಪ - ತಿರುಚಾನೂರು | 1 | ರೂ 800/- |
| 5. | ಶ್ರೀ ಪದ್ಮಾವತೀ ಕಲ್ಯಾಣಮಂಟಪಗಳು<br>- ಪೋಲೀಸ್ ಸ್ಟೇಷನ್‌ಬಳಿ, ತಿರುಚಾನೂರು | 1 ರಿಂದ 4 | ರೂ 800/- |
| 6. | ಸೀತಾರಾಮ ಕಲ್ಯಾಣಮಂಟಪ, ತಿರುಪತಿ | 1 | ರೂ. 1200/- |
| 7. | ಶ್ರೀ ಗೋವಿಂದರಾಜ ಕಲ್ಯಾಣಮಂಟಪ, II ಹೊಸ ಸತ್ರ, ತಿರುಪತಿ | ನೆಲ ಅಂತಸ್ತು<br>ಮೊದಲ ಅಂತಸ್ತು | ರೂ 1500/-<br>ರೂ. 500/- |
| 8. | ಶ್ರೀ ಕೋದಂಡರಾಮ ಕಲ್ಯಾಣಮಂಟಪ, III ಹೊಸ ಸತ್ರ, ತಿರುಪತಿ | | ರೂ. 800/- |
| 9. | ಶ್ರೀನಿವಾಸಮಂಗಾಪುರಂ ಕಲ್ಯಾಣಮಂಟಪ, ಶ್ರೀನಿವಾಸಮಂಗಾಪುರ | | ರೂ 1000/- |
| 10. | ಜಿಲ್ಲಾಕೇಂದ್ರಗಳಲ್ಲಿನ ಕಲ್ಯಾಣಮಂಟಪಗಳು | | ರೂ 6000/- |
| 11. | ನಗರಾಡಳಿತ ಪ್ರದೇಶದ ಕಲ್ಯಾಣಮಂಟಪಗಳು | | ರೂ. 8000/- |
| 12. | ಬೆಂಗಳೂರಿನ ಕಲ್ಯಾಣಮಂಟಪ - ಬೆಂಗಳೂರು | | ರೂ. 10000/- |
| 13. | ಭುವನೇಶ್ವರದ ಕಲ್ಯಾಣಮಂಟಪ | | ರೂ. 6000/- |

ಸಾರ್ವಜನಿಕರು ಈ ಬದಲಾವಣೆಗಳನ್ನು ಗಮನಿಸಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

ಶ್ರೀಹರಿಯ ತಮ್ಮಗಳನ್ನು ಪೋಷಿಸಿ ಪಾಲಿಸಲಿ ಎಂದು ವಿನಂತಿಸಿಕೊಂಡಿದ್ದಾರೆ.

ನಿನ್ನವರಲಿ ಇವಗೆ ಇನ್ನು ರತಿಯನ್ನು
ಕೊಟ್ಟು ನಿನ್ನವನೆಂದು ಅರಿದು
ನಿನ್ನ ನಾ ಪ್ರಾರ್ಥಿಸಿದೆ ಅನ್ಯರಿಗೆ ಅಲ್ಪರಿಯೆ
ಎನ್ನ ಪಾಲಿಸುವ ದೊರೆಯೆ
ಎನ್ನ ಮಾತಲ್ಲವಿದು ಎನ್ನ ಹಿರಿಯರ
ಮಾತು ಮನ್ನಿಸಬೇಕು ಕರುಣಿ
ಅನಂತ ಗುಣ ಪೂರ್ಣ ಗೋಪಾಲ ವಿಠಲ
ಇನ್ನಿದನೆ ಪಾಲಿಸುವುದೋ ಸ್ವಾಮಿ

ಗೋಪಾಲದಾಸರು ತಮ್ಮ ಸ್ವತಃ ಆಯುಷ್ಯದಲ್ಲಿ ನಲವತ್ತು ವರ್ಷಗಳನ್ನು ಧಾರೆ ಎರೆದು, ಶ್ರೀಹರಿಯ ಪ್ರಾರ್ಥನೆಯ ಮುಖಾಂತರ ಶ್ರೀನಿವಾಸಾಚಾರ್ಯರನ್ನು ಗುಣಪಡಿಸಿದರೆಂದು ಪ್ರತೀತಿ

ರಥಾರೂಢನಾದ ಶ್ರೀ ವೆಂಕಟೇಶ್ವಲರಸ್ವಾಮಿಯನ್ನು ತಮ್ಮ ಮನೋಮಂದಿರಕ್ಕೆ ಆಹ್ವಾನಿಸುತ್ತಾ ವರ್ಣಿಸಿದ್ದಾರೆ

ನಡೆದು ಬಾರಯ್ಯ ನೀನು ವೆಂಕಟರಾಯ
ನಡೆದು ಬಾರಯ್ಯ ಬಾ ಕಡಲಿಗೆ ಕುಂಭಸಂಭವ
ಸಡಗರದಿಂದ ನೀ ಮೆಲ್ಲ ನಡಿಯನಿಡುತ ವೇಗ
ಎಡಬಲದಲಿ ನಿನ್ನ ಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖ ವೆಂಕಟ
ವಿಜಯ ದಶಮಿ ಆಶ್ವೀಜಮಾಸದ ಶುದ್ಧದಲಿ
ನಿಜ ರಥಾರೂಢನಾಗಿ ಸುಜನರಿಂದೊಡಗೂಡಿ
ಗಜಹಂಸ ಮಯೂರ ದ್ವಿಜ ಸಿಂಗ ಸಾರಂಗ
ಮಜ ಭಾಪುರೆ ಎನಲು ತ್ರಿಜಗವು ತಲೆದೂಗೆ
ಅಜನು ಸ್ತುತಿಯ ಮಾಡೆ
ಋಜುಗಣಾದಿಪ ಪಾಡೆ
ಗಜಮುಖನಯ್ಯನು ನಿಜಾನಂದದಲಾಡೆ

ಈ ಕೀರ್ತನೆಯಲ್ಲಿಯೇ ನಿಂದಾಸ್ತುತಿಯನ್ನು ಸಹ ಮಾಡಿ, ಶ್ರೀ ಹರಿಯೇ ನಿನಗೆ ಶರಣಾಗತ ರಕ್ಷಕ ವರ

ಮಣಿ ಎಂದು ಬಿರುದು ದೇಕಾದರೆ ಅತಿ ವೇಗನೆ ಬಾ ಎಂದು ಬೇಡಿದ್ದಾರೆ.

ಪರಿಪರಿಯಿಂದಲಿ ಕರವ ಮುಗಿದು ಸ್ತುತಿಸಿ
ಕರೆದರೆ ಬಾರದ ಗರ್ವತನವು ಯಾಕೋ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಅವ ನಿನ್ನ ಕಿರಿಯಪ್ಪನ ಮಗನೇನೋ
ಶರಣಾಗತ ರಕ್ಷಕ ವರಮಣಿ ಎಂಬೋ ಬಿರುದು
ಬೇಕಾದರೆ ಸರ್ರನೆ ಬಾರಯ್ಯ ಗರುಡಗಮನ
ಗೋಪಾಲ ವಿಠಲರೇಯ ಕರುವಿನ ಮೊರೆಗಾವು
ನರೆದಂತೆ ಪೊರೆಯುತ

ಗೋಪಾಲದಾಸರಿಂದ ಆಯುಷ್ಯ ದಾನವನ್ನು ಪಡೆದ ಶ್ರೀನಿವಾಸಾಚಾರ್ಯರು ವಿಜಯದಾಸರ ಪೂರ್ವ ಸೂಚನೆಯಂತೆ ಗೋಪಾಲದಾಸರಲ್ಲಿ ಶಿಷ್ಯತ್ವವನ್ನು ಪಡೆದರು. ಜಗನ್ನಾಥ ವಿಠಲ ಅಂಕಿತ ನಾಮದಿಂದ ಜಗನ್ನಾಥದಾಸರೆಂದು ಪ್ರಖ್ಯಾತಿ ಪಡೆದರು. ಇದೇ ಸಂದರ್ಭದಲ್ಲಿ ಈ ಶಿಷ್ಯ ಪರಂಪರೆಯಲ್ಲಿ ಹೆಳವನಕಟ್ಟೆ ಗಿರಿಯಮ್ಮ ಓರ್ವರಾಗಿದ್ದುದು ಗಮನಾರ್ಹ ಸಂಗತಿ. ಆಕೆಯು ಬಿಡಿಸಿದ ರಂಗೋಲಿಯ ಚಿತ್ರದಲ್ಲಿ ಶ್ರೀಕೃಷ್ಣನನ್ನು ಸಾಕ್ಷಾತ್ಕರಿಸಿ, ದರ್ಶಿಸಲು ಅನುವು ಮಾಡಿಕೊಟ್ಟಿದ್ದಾರೆ ಇನ್ನೋರ್ವರಾದ ವ್ಯಾಸತತ್ವಜ್ಞರು ಸಹ ಗೋಪಾಲದಾಸರಿಂದ ಕೃತಿ ರಚನೆ ಮಾಡಿರುವುದಾಗಿ ಕಂಡು ಬರುತ್ತದೆ.

ಶ್ರೀಹರಿಯ ಸರ್ವ ವ್ಯಾಪಕತೆಯನ್ನು ವರ್ಣಿಸುತ ಈಶನಿಲ್ಲದೆ ಹಾಗೂ ಆತನ ಪ್ರೇರಣೆಯಿಲ್ಲದೆ ಏನೂ ನಡೆಯದು ಎಂದು ಭಿನ್ನವಿಸಿದ್ದಾರೆ.

ಎಲ್ಲಿ ನೋಡಲು ನೀನಿಲ್ಲದ ಸ್ಥಳವಿಲ್ಲ
ಎಲ್ಲರಂತರ್ಯಾಮಿ ಎಲ್ಲಿಯು ನೀನೆ
ಹುಲ್ಲುಕಾಷ್ಟ ಜಡಜೀತನಗಳಲ್ಲಿ ನೀ
ನಿಲ್ಲದಿಲ್ಲವೆಂದು ಎಲ್ಲ ಸ್ತುತಿಸುತಿದೆ
ಸಲ್ಲದ ಮನುಜನು ನಿನಗೆ ತನಗೆ ಬೇಧ
ವಿಲ್ಲವೆಂಬುವನಿಗೆ ಏನೆಂಬೆ ಹರಿಯೆ
ಜಲಜ ನೀರೊಳಗಿದ್ದು ಲೇಪನವಿಲ್ಲದಂತ
ಎಲ್ಲ ಪ್ರೇರಕನು ಎಲ್ಲರಲ್ಲಿಯು ನೀನೆ
ಚೆಲ್ಲರೆ ದೈವರ ಗಂಡ ಗೋಪಾಲವಿಠಲ ನಿನ್ನ
ಬಲ್ಲವರೆ ಬಲ್ಲರು ಎಲ್ಲವರಿಯರು

ವಿಷಯ ಲಾಲಸೆಗಳಲ್ಲಿ ಮುಳುಗಿರುವ ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಡಲು ಸಾಧ್ಯವಾಗದ ಈ ಮಾನವ ಸಹಜಗುಣದಿಂದ, ಶ್ರೀಹರಿಯು ಉದ್ಧರಿಸಲು ಕೇಳಿಕೊಂಡಿದ್ದಾರೆ.

ಇಂದ್ರಿಯಂಗಳು ವಿಷಯದಿಂದ ತೆಗೆಯಲು
ಗೋವಿಂದ ಎನ್ನ ವಶಕೆ ಬಾರವೊ
ಇಂದಿರೆ ಅರಸ ಬ್ರಹ್ಮಾದಿ ವಂದಿತ ನಿನ್ನ
ಬಂಧಕ ಶಕುತಿಗೆ ನಮೋ ನಮೋ

ಅರಿತು ಅರಿತು ಎನಗತಿ ಲವವಾದರು
ವಿರಕುತಿ ವಿಷಯದಿ ಬಾರದು
ಕರುಣಾಸಾಗರ ನಿನ್ನ ಮೊರೆ ಹೊಕ್ಕಲ್ಲದೆ
ಮರುಳು ನೀಗುವ ಬಗೆಗಾಣೆನೊ

ಎಂದಿಗೆ ನಿನ್ನ ಚಿತ್ತಕೆ ಬರುವುದೊ ಸ್ವಾಮಿ
ಅಂದೆ ಉದ್ಧರಿಸಯ್ಯ ಕರುಣೆಯ
ಸುಂದರ ವಿಗ್ರಹ ಗೋಪಾಲ ವಿಠಲ ಸುಖ
ಸಾಂದ್ರ ಭವ ಮೋಚಕ ನಮೋ ನಮೋ

ಸತ್ಸಂಗ ಎನ್ನುವುದು ಒಂದು ಸುಖ. ಅದರಲ್ಲಿರುವಷ್ಟು ಸಂತೋಷ ಜಗದೊಡೆಯನ ಪ್ರೇರಣೆ ಎಂದು ಭಾವಿಸಿ ಪಾಡಿದ್ದಾರೆ.

ಏನು ಸುಖವೋ ಎಂಥಾ ಸುಖವೊ
ಹರಿಯ ಧ್ಯಾನ ಮಾಡುವವರ
ಸಂಗ ಏನು ಸುಖವೋ

ತಂಬೂರಿ ಮೀಟುತ್ತಾ ಹೃದಯ
ಅಂಬಕದಿಂದ ಆನಂದ
ಅಂಬುಗರೆಯುತ ಬಲು
ಸಂಭ್ರಮದಿಂದಿಹರ ಸಂಗ

ಗೆಜ್ಜೆಯು ಕಾಲಲ್ಲಿ ಕಟ್ಟಿ
ಲಜ್ಜೆ ಬಿಟ್ಟು ಹರಿಯ ನಾಮ
ಗರ್ಜನೆ ಮಾಡುತ್ತ ಅಘ
ವರ್ಜಿತರಾದವರ ಸಂಗ

ಸ್ವರ್ಣ ಲೋಷ್ಠ ಸಮವೆಂದು
ತನ್ನದೆಂಬೊ ಹಮ್ಮು ತೊರೆದು
ಘನ್ನ ಮಹಿಮನ್ನ ಪಾಡಿ
ಧನ್ಯರಾಗಿಹರ ಸಂಗ

ಹಾಗೆಯೇ ಮುಂದುವರೆದು ದಾಸರ ಸಂಗ ಹಾಗೂ ಸಖ್ಯ ಸಂತಸ ತರುವುದು ಎಂದೇ ಹೇಳಿದ್ದಾರೆ.

ನಡೆವೋದು ನುಡಿವೋದು ನಿರುತ
ಕೊಡುವೋದು ಕೊಂಬೋದು ಜಗ
ದೊಡೆಯನ ಪ್ರೇರಣೆಯೆಂದು
ನುಡಿದು ಹಿಗ್ಗುವರ ಸಂಗ
ಸೃಷ್ಟಿಗೊಡೆಯನ ಮನಮುಟ್ಟಿ ಭಜಿಸುತ್ತ ಜ್ಞಾನ
ಕೊಟ್ಟ ಗೋಪಾಲ ವಿಠಲ ಗಿಷ್ಟ ರಾಗಿಹರ ಸಂಗ

ಮಧ್ವಾಚಾರ್ಯರನ್ನು ಸ್ತುತಿಸುವಾಗ ಹನುಮ - ಭೀಮ ಮಧ್ವರ ಚಿತ್ರಣವನ್ನು ಬಿಡಿಸಿದ್ದಾರೆ. ಹನುಮಾವತಾರದಲ್ಲಿ ಶ್ರೀರಾಮನಿಗೆ ಸಹಾಯವಾದ ಪ್ರಸಂಗ ಮೊದಲಾದ ರಾಮಾಯಣದ ಪ್ರಸಂಗಗಳನ್ನು ವಿವರಿಸಿದ್ದಾರೆ.

ಕಂಜಮಿತ್ರನ ಸುತನೊಡನೆ ಸಖ್ಯವ ಮಾಡಿ
ಕಂಜನಾಭನ ಪಾದಕ್ಕೆರಗಿ ಮುದ್ರಿಕೆ ಕೊಂಡು
ಮಂಜಿನುದಕ ಬಿಂದುವಂತವನಧಿ ದಾಟಿ
ಸಂಜೆಯ ಚರನ ಪುರವ ಪೊಕ್ಕು ವನದೊಳು
ಕುಂಜರಗಮನೆಗೆ ಕುರುಹು ಕೊಟ್ಟು ಸುರರ
ಭಂಜಿಸಿ ಅಕ್ಷಕುವರನ ಸಂಹಾರ ಮಾಡಿ
ಕಂಜಸಂಭನಾಸ್ತ್ರಕೆ ಸಿಲುಕಿ ಅಸುರಗೆ
ಅಂಜದುತ್ತರ ನಡೆಸಿ ದನುಜಬಲ
ಪುಂಜಗಳನೆ ವರೆಸಿ ಬಾಲದಲಿದ್ದ
ಪಂಜಿಲಿ ಪುರದಹಿಸಿ ಮರಳಿ ಬಂದು
ಕಂಜ ಜಾಂಡದ ದೊರೆಗೆರಗಿದ ಧೀರ

ಭೀಮಾವತಾರದಲ್ಲಿ ಹಿಡಿಂಬ, ಬಕ, ಜರಾಸಂಧ, ಕೀಚಕ ಇವರುಗಳನ್ನು ಸಂಹಾರ ಮಾಡಿದ ಬಗ್ಗೆ ಉಲ್ಲೇಖಿಸಿದೆ.

ಕೃಷ್ಣನ ಸೇವೆಗೋಸುಗವೆ ಕುಂತಿಜನಾಗಿ
ಹುಟ್ಟಿದಾಕ್ಷಣ ಬೆಟ್ಟ ಕುಟ್ಟಿ ಹಿಟ್ಟನೆ ಮಾಡಿ
ಕೊಟ್ಟವಿಷವನುಂಡು ಅಹಿಗಳನೊರೆಸಿ
ಕೈಕಟ್ಟ ಜಳದೊಳಿದೆ ಬಂದು ಲಾಕ್ಷಾಗೃಹ
ಸುಟ್ಟು ಭಸ್ಮವ ಮಾಡಿ ಹಿಡಿಂಬಕನ ಕೊಂದು
ದಿಟ್ಟ ಘಟೋತ್ಕಚನ ಪಡೆದು ದನುಜೆಯಲ್ಲಿ
ಶಿಷ್ಟ ದ್ವಿಜನಿಗೊಲಿದು ಬಕನ ಸಂಹಾರ ಮಾಡಿ
ದುಷ್ಟರ ಸಂಹರಿಸಿ ಶಲ್ಯನ ವ್ಯೋಮ
ಕಿಟ್ಟು ನೆಲದಲ್ಲಿರಿಸಿ ಇಂದ್ರಪ್ರಸ್ಥ
ಪಟ್ಟಣವಾಳಿದ ಶೂರ ಸಮೀರ

ಗುರುಮಧ್ವಾಚಾರ್ಯರು ದಶೋಪನಿಷತ್ತುಗಳಿಗೆ ಟೀಕಾ ಬರೆದು ದ್ವಾದಶ ಸ್ತೋತ್ರ ರಚಿಸಿದ ಬಗ್ಗೆ ತಿಳಿಸಿ ಸ್ತುತಿಸಿದ್ದಾರೆ.

ಆನಂದ ತೀರ್ಥ ನಿಜಾನಂದಚರಿತ ಪಂ
ಚಾನನ ಸುರ ಮುಖ್ಯಾದ್ಯರಿಗೆಲ್ಲ ನೀ ಮುಖ್ಯ
ಪ್ರಾಣನೆ ಅಹಿತಪರ್ವತವನುಂಗುಟದಿ ಮೀಟಿ
ಶ್ರೀನಾಥ ನಿನ್ನ ಬಲವೆಷ್ಟು ಪೇಳೆನೆ
ಈ ನಳಿನಜಾಂಡವ ಒಡೆದು ತಾಳವ ಮಾಡಿ
ಅನಾಯಾಸದಲ್ಲಿ ಪೋಷಿಪೆನೆಂದನೆ
ದಾನವಸಮುದಾಯತಿಮಿರ ಮಾರ್ತಾಂಡನೆ
ಜ್ಞಾನವಯಾನಂದ ಗೋಪಾಲವಿಠಲನ
ಧ್ಯಾನಲೋಲತಿಬಲ ಭಕ್ತತ
ದೋಷ ಕಾನನದಾವಾನಲ ಸ್ವರೂಪದ
ಆನಂದ ಕೊಡು ಸುಶೀಲ ಸುಮನಸ
ಸಮಾನ ಚಕೋರ ಸೋಮ ಸದ್ಗುಣಧಾಮ

* * *

# ಸಂಸ್ಕಾರಗಳು

- ಪ್ರೊ|| ವಿ. ಎಸ್. ಭಟ್ಟ

ಭೂಗರ್ಭದಲ್ಲಿ ಬಂಗಾರ ದೊರಕಿದರೂ ಅದನ್ನು ಹಾಗೇ ಧರಿಸಲು ಬರುವುದಿಲ್ಲ ಅದಕ್ಕೆ ಹಲವು ಬಗೆಯ ಸಂಸ್ಕಾರ ನೀಡಿದ ಬಳಿಕ ಅದು "ಅಪ್ಪಟ ಅಪರಂಜಿ" ಎನಿಸುತ್ತದೆ ಕೇವಲ ಒಂದು ದಿನ ಕೆಡದೇ ಇರುವ ಹಾಲಿಗೆ ಸಂಸ್ಕಾರ ನೀಡಿ ಮೊಸರನ್ನಾಗಿಸಿ, ನಂತರ ಬೆಣ್ಣೆಯನ್ನು ಮಾಡಿ ಬಳಿಕ ಕಾಸಿ ತುಪ್ಪದ ರೂಪ ಕೊಟ್ಟಾಗ ಹಲವಾರು ತಿಂಗಳುಗಳು ಉಳಿಯುತ್ತವೆ ಹಾಗೇ ಹುಟ್ಟಿದ ಪ್ರತಿ ವ್ಯಕ್ತಿಯು ಶಕ್ತಿಯಾಗಿ ಹೊರ ಹೊಮ್ಮಲು ಕೆಲ ಸಂಸ್ಕಾರ ಅನಿವಾರ್ಯ

ಕೆಲವು ನಿಶ್ಚಿತ ಕ್ರಮದ ಮೂಲಕ ವ್ಯಕ್ತಿಯ ಶಾರೀರಿಕ, ಮಾನಸಿಕ, ಆಧ್ಯಾತ್ಮಿಕ ಉನ್ನತಿಗೆ ಅನುಕೂಲವಾಗುವಂತೆ ದೇಹವನ್ನು ಮನಸ್ಸನ್ನು ಅಣಿಗೊಳಿಸುವ ಕ್ರಿಯೆಯೇ ಸಂಸ್ಕಾರ. ಇವು ವ್ಯಕ್ತಿಯ ವ್ಯಕ್ತಿತ್ವ ಹಾಗೂ ದೇಹವನ್ನು ಸಂಸ್ಕರಿಸುತ್ತವೆ ಇದನ್ನೇ ಕವಿ ಡಿ.ವಿ.ಜಿ. ಯವರು-

ದೇವಾಂಶ ಪಶ್ವಂಶಗಳ ಗಂಟು ಮಾನುಷತೆ<br>
ಧೀವಿಮರ್ಶೆಯಿಸೊಂದ ಸತ್ಕರಿಸಿ ಬಲಿಸಿ<br>
ಭಾವ ಪರಿಶೋಧನೆಯಿಂದಿನ್ನೊಂದ<br>
ದಂಡಿಪುದೆ ಜೀವ ಪ್ರಕರ್ಷಗತಿ

ಎನ್ನುತ್ತಾರೆ. ಮಾನವನಲ್ಲಿರುವ ಪಶು ಅಂಶ ತೊಲಗಿ ಜೀವ ದೇವನಾಗಬೇಕಾದರೆ ಕೆಲ ಸಂಸ್ಕಾರ ಆಗಲೇಬೇಕು.

ಹುಟ್ಟಿದ ವ್ಯಕ್ತಿ ಸರ್ವೋನ್ನತಿಗೇರಲು ನಮ್ಮ ಪೂರ್ವಜರು ೧೦ ರಿಂದ ೫೨ ರ ವರೆಗೆ ಸಂಸ್ಕಾರಗಳನ್ನು ಗುರುತಿಸಿದ್ದಾರೆ ಅದರಲ್ಲಿ ೧೬ ಮೆಟ್ಟಿಲುಗಳು ಬಹು ಪ್ರಮುಖವಾದುದು ವಯೋಮಾನಕ್ಕೆ ತಕ್ಕಂತೆ ನಡೆಯುವ ಈ ೧೬ ಮೆಟ್ಟಿಲುಗಳೇ ಷೋಡಶ ಸಂಸ್ಕಾರಗಳು ಈ ಎಲ್ಲ ಸಂಸ್ಕಾರಗಳು ಅಗ್ನಿಯ ಸಾನ್ನಿಧ್ಯದಲ್ಲಿ ನಡೆಯುವುದರಿಂದ ಇವು ಜೀವನಕ್ಕೆ ಧಾರ್ಮಿಕ ಪರಿಶುದ್ಧತೆ ತಂದು ಕೊಡುತ್ತವೆ

ಈ ಷೋಡಶ ಸಂಸ್ಕಾರಗಳು ಯಾವುವೆಂದರೆ ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ, ಕರ್ಣವೇದನ, ಚೌಲ, ವಿದ್ಯಾರಂಭ, ಉಪನಯನ, ವೇದಾರಂಭ, ಕೇಶಾಂತ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ. ಈ ಸಂಸ್ಕಾರಗಳಲ್ಲಿ ಕೆಲವು ಇಂದು ಅಷ್ಟು ಅರ್ಥವತ್ತಾಗಿ ಜಾರಿಯಲ್ಲಿ ಇರದಿದ್ದರೂ ಹಲವು ಅತ್ಯಂತ ಔಚಿತ್ಯಪೂರ್ಣವಾಗಿವೆ.

ಇವುಗಳಲ್ಲಿ ಗರ್ಭದಾನ, ಪುಂಸವನ, ಸೀಮಂತಗಳೆಂಬ ಮೂರು ಸಂಸ್ಕಾರಗಳನ್ನು ಜನನಪೂರ್ವದಲ್ಲಿಯೇ ಮಾಡಲಾಗುತ್ತದೆ ಹುಟ್ಟುವ ಮಗು ನಿಮ್ಮ ಮುಡಿಗೆ ಹೂವ ತಹೆನಲ್ಲದೆ ಹುಲ್ಲ ತರೆನು ಎಂಬ ರೀತಿಯಲ್ಲಿ ಸುಸಂಸ್ಕೃತನಾಗಿರಬೇಕು, ಎಂಬುದೇ ಇದರ ಉದ್ದೇಶ. ಸ್ವಾಭಾವಿಕವಾಗಿ ಪಶು ಕಾಮ ಪ್ರವೃತ್ತಿಯನ್ನು ನಮ್ಮ ಸಂಸ್ಕೃತಿ ಒಪ್ಪುವುದಿಲ್ಲ; ಅದನ್ನು ಸ್ವೀಕರಿಸಿದರೂ ಅದಕ್ಕೆ ಧಾರ್ಮಿಕ ಸಾಂಸ್ಕೃತಿಕ ಅಂಶ ಸೇರಿಸಿ ಉದಾತ್ತಗೊಳಿಸಿ ಪವಿತ್ರ ಸಂಸ್ಕಾರವಾಗಿ ನಿರೂಪಿಸಿದ್ದಾರೆ. ಹುಟ್ಟಲಿರುವ ಸಂತಾನ ಒಳ್ಳೆಯ ಗುಣಗಳಿಂದ ಕೂಡಿ ಪವಿತ್ರವಾಗಿರಲೆಂಬುದೇ ಇದರ ಉದ್ದೇಶ ಆದ್ದರಿಂದ ಸೂಕ್ತವಾದ ಪೂಜೆ ಹೋಮ, ಹವನಪ್ರಾರ್ಥನೆಗಳ ನಂತರ ಪರಿಶುದ್ಧ ಭಾವನೆಯಿಂದ ಸತಿ - ಪತಿ ಸಮಾಗಮ ಇವು ಗರ್ಭದಾನ ಹಾಗೂ ಪುಂಸವನ ಸಂಸ್ಕಾರದ ಹಿಂದಿರುವ ಉದ್ದೇಶಗಳು ಗರ್ಭಿಣಿಸ್ತ್ರೀ ನಾಲ್ಕರಿಂದ ಐದು ತಿಂಗಳ ಅವಧಿಯಲ್ಲಿರುವಾಗ ಅವಳ ಮಾನಸಿಕ ಪ್ರಸನ್ನತೆಗಾಗಿ ಸೀಮಂತವೆಂಬ ಸಂಸ್ಕಾರವನ್ನು ಮಾಡಲಾಗುತ್ತದೆ. ಸೀಮಂತವೆಂದರೆ ಬೈತಲೆ ಬಾಚಿ ಹೂ ಮುಡಿಸಿ ಪ್ರಸನ್ನಗೊಳಿಸುವ ಕ್ರಿಯೆ. ಈ ಸಮಯದಲ್ಲಿ ತಾಯಿ ಪ್ರಸನ್ನಚಿತ್ತಳಾಗಿದ್ದರೆ ಅದು ಹುಟ್ಟುವ ಶಿಶುವಿನ ಮೇಲೂ ಒಳ್ಳೆಯ ಪರಿಣಾಮ ಬೀರುತ್ತದೆ. ಮನಶ್ಶಾಸ್ತ್ರಜ್ಞರೂ ಈ ಸಂಸ್ಕಾರ ಅರ್ಥಪೂರ್ಣವೆಂದು ಸಮರ್ಥಿಸಿದ್ದಾರೆ

ಇನ್ನು ಜಾತ ಕರ್ಮದ ಮೂಲಕ ಮಗುವನ್ನು ಕುಟುಂಬಕ್ಕೆ ಸ್ವಾಗತಿಸಿ ದೀರ್ಘಾಯುಷ್ಯ ಸಂಪತ್ ಸಮೃದ್ಧಿಗಾಗಿ ಪ್ರಾರ್ಥಿಸಲಾಗುತ್ತದೆ. ನಾಮಕರಣದ ಮೂಲಕ ಶಿಶುವಿಗೆ ಮೊದಲು ಕುಲದೇವರ ಹೆಸರನ್ನು ಇಟ್ಟರೂ ಆಮೇಲೆ ಕಿವಿಗೆ ಇಂಪಾದ ಮೋಹಕವಾದ ವ್ಯಾವಹಾರಿಕ ಹೆಸರನ್ನು ಇಡಲಾಗುತ್ತದೆ. ಶಿಶುವಿಗೆ ಸುಮಾರು ನಾಲ್ಕು ತಿಂಗಳಾಗುತ್ತಿದ್ದಂತೆ ಅದನ್ನು ನಾಲ್ಕು ಗೋಡೆಗಳ ಸಣ್ಣ ಕೊರಡಿಯಿಂದ ದೊಡ್ಡ ಪ್ರಪಂಚಕ್ಕೆ ತಂದು, ಮಗುವಿನ ರಕ್ಷಣೆಗಾಗಿ ಸೂರ್ಯ ಚಂದ್ರರನ್ನು, ದೇವತೆಗಳನ್ನು ಪ್ರಾರ್ಥಿಸುವುದೇ ನಿಷ್ಕ್ರಮಣ ಸಂಸ್ಕಾರ.

'ಜೈಸಾ ಖಾವೇ ಅನ್ ವೈಸಾ ಆವೇ ಮನ್' ಎಂಬ ಹಿಂದಿಯ ಗಾದೆಯಂತೆ ಅನ್ನ ಹೇಗೋ ಮನಸ್ಸು ಹಾಗೇ ಆದ್ದರಿಂದ ಸುಮಾರು ೬-೭ ತಿಂಗಳು ಆಗುತ್ತಿದ್ದಂತೆ ಮೊಟ್ಟಮೊದಲು ಅನ್ನಪ್ರಾಶನ ಮಾಡಿಸುವುದು ರೂಢಿ ಹಾಗೇ ಸುಮಾರು ಮೂರು ವರ್ಷವಾಗುತ್ತಿದ್ದಂತೆ ಶರೀರದ ಕೊಳೆ ತೊಳೆದು ಶುಚಿಯಾಗಿಡುವ ಸಂಸ್ಕಾರವೇ ಚೌಲ ಪ್ರಥಮಬಾರಿ ಕಿವಿ ಚುಚ್ಚಿ ಆಭರಣ ತೊಡಿಸುವುದು ನಮ್ಮಲ್ಲಿ ಒಂದು ಸಂಸ್ಕಾರವೆನಿಸಿದೆ ಇಲ್ಲಿ ಶೃಂಗಾರ ತತ್ವದೊಂದಿಗೆ ಆರೋಗ್ಯತತ್ವವೂ ಹುದುಗಿದೆ. ಸಕಾಲದಲ್ಲಿ ಕಿವಿ ಚುಚ್ಚುವುದರಿಂದ ಅಂಡವಾಯು ಕಾಯಿಲೆ ಬರುವುದಿಲ್ಲವೆಂದು ಆಯುರ್ವೇದ ಆಚಾರ್ಯ ಸುಶ್ರುತ ಹೇಳುತ್ತಾನೆ

ಇನ್ನು ವಿದ್ಯಾರಂಭ ವೇದಾರಂಭ - ಇತ್ಯಾದಿಗಳೆಲ್ಲ ಮಗು ಜ್ಞಾನನಿಧಿಯಾಗಬೇಕೆಂಬ ಆಕಾಂಕ್ಷೆಯಿಂದ ಕೈಗೊಳ್ಳುವ ವಿದ್ಯಾಸಂಸ್ಕಾರಗಳಾದರೆ, ಸಮಾವರ್ತನ ವಿದ್ಯೆಮುಗಿಸಿ ಮನೆಗೆ ಬರುವಾಗ ಮಾಡುವ ಸ್ನಾತಕ ಸಂಸ್ಕಾರವಾಗಿದೆ ಧರ್ಮ ಪ್ರಜಾಸಂಪತ್ತಿಗಾಗಿ ಸಹಧರ್ಮಿಣಿಯನ್ನು ಸ್ವೀಕರಿಸಿ ಗ್ರಹಸ್ಥನ ನೆಲೆಗೆ ಸೇರಲು ಮಾಡುವ ಸಂಸ್ಕಾರವೇ ವಿವಾಹ ಹಾಗೇ ಜೀವಿಯ ಸದ್ಗತಿಗಾಗಿ ಮಾಡುವ ಕೊನೆಯ ಸಂಸ್ಕಾರವೇ ಅಂತ್ಯೇಷ್ಟಿ.

ಒಟ್ಟಾರೆ ಮನುಷ್ಯನ ದೇಹ ಮನಸ್ಸುಗಳನ್ನ ಶುದ್ಧಿಗೊಳಿಸಿ, ಅವನ ಬಾಳಿನಲ್ಲಿ ಸುಖ ಸಂತೋಷಗಳನ್ನು ನೆಮ್ಮದಿ ಶಾಂತಿಗಳನ್ನು ನೀಡಿ, ಅವನ ಜೀವನವನ್ನು ಆನಂದಮಯವನ್ನಾಗಿಸಿ "ಇಲ್ಲೂ ಅಲ್ಲೂ ಸಲ್ಲುವಂತೆ ಮಾಡುವುವುಗಳೇ ಸಂಸ್ಕಾರಗಳು" ಎನ್ನಬಹುದು



## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ. ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ. ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**<br>
(ರಿಸೆಪ್ಷನ್) ತಿ.ತಿ.ದೇ., ತಿರುಪತಿ.

# ಗಲಗಲಿ ಅವ್ವನವರು

-ಹಣಮಂತ ತಾಸಗಾಂವಕರ.

ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ಮಾಧ್ವ ವಾಙ್ಮ *ಯಕ್ಕೆ ಮಹಿಳೆಯರ ಕಾಣಿಕೆ ಅಪಾರವಾಗಿ ಸಂದಿದೆ ಕರ್ನಾಟಕದ ಮೀರಾಬಾಯಿಯೆಂದೇ ಹೆಸರಾಗಿದ್ದ ಹೆಳವನ ಕಟ್ಟೆ ಗಿರಿಯಮ್ಮ ಹರಪನಹಳ್ಳಿ ಭೀಮವ್ವ ಅವರೇ ಮುಂತಾದವರ ಸಾಲಿಗೆ ಸೇರಿದ ವೇದೋ ಪನಿಷತ್ ಪಾರಂಗತರಾಗಿದ್ದ ಗಲಗಲಿಯ ಅವ್ವನ ವರೂ ಒಬ್ಬರು.

ಮಹರ್ಷಿಗಳ ಮನೆತನವೆಂದೇ ಸುಪ್ರಸಿದ್ಧವಾದ ಪೂಜ್ಯ ಗಲಗಲಿ ಆಚಾರ್ಯರ ವಂಶದ ಮುದ್ಗಲಾ ಚಾರ್ಯರ ಧರ್ಮಪತ್ನಿಯೇ ಈ ಅವ್ವನವರು. ಹದಿ ನೇಳನೆಯ ಶತಮಾನದ ಉತ್ತರಾರ್ಧ ಹಾಗೂ ಹದಿ ನೆಂಟನೆ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ್ದಿ ರಬಹುದಾದ ಇವರ ಹೆಸರು ರಮಾ. ಪ್ರಮೇಯ ಜ್ಞಾನ, ನ್ಯಾಯಶಾಸ್ತ್ರದ ಅಪ್ರತಿಮ ವಿದ್ವಾಂಸರಾಗಿ ದ್ದರು

ಉತ್ತರಾದಿ ಮಠದ ಸತ್ಯಧರ್ಮತೀರ್ಥರ ಸಮ ಕಾಲೀನರಾಗಿದ್ದ ಅವ್ವನವರಿಗೆ, ಶ್ರೀಗಳು ಪಾಂಡಿ ತ್ಯಕ್ಕಾಗಿ ಮನ್ನಣೆ ನೀಡಿದ್ದರು ರಾಮೇಶ ರಮಿ ಅರಸ ಅಂಕಿತಗಳಿಂದ ಭಕ್ತಿಪ್ರದ ಮುಯ್ಯದ ಹಾಡು ಗಳು, ಕೋಲು ಹಾಡುಗಳು, ಶೃಂಗಾರ ತಾರತಮ್ಯ - ಮುಂತಾದ ಅಧ್ಯಾತ್ಮಿಕ ಗೀತ ಕಾವ್ಯಗಳನ್ನು ನೀತಿ-ಬೋಧಕವಾಗಿ ರಚಿಸಿ ಹರುಷದಿಂದ ಶ್ರೀಕೃಷ್ಣಗೆ ಅರ್ಪಿಸಿದ್ದಾರೆ

ಇದರಲ್ಲಿ ದೇವತಾ ತಾರತಮ್ಯದ ತತ್ವಗಳನ್ನೆಲ್ಲ ಎಲ್ಲರಿಗೂ ತಿಳಿಯುವಂತೆ ಹೇಳುತ್ತಲೇ ಭಕ್ತಿಯ ಜೊತೆಗೆ, ಶೃಂಗಾರ, ಹಾಸ್ಯ ಕರುಣಾರಸಗಳನ್ನು ಹರಿಸಿದ್ದಾರೆ

ವೇದಶಾಸ್ತ್ರ ಪುರಾಣ ಹಾಗೂ ಸಾಹಿತ್ಯದೊಳ ಗಿನ ಪಾಂಡಿತ್ಯ ವೈರಾಗ್ಯದ ಅನುಭಾವ ನೀತಿಸು ಧೆಯನ್ನೂ ಶುದ್ಧಾಚರಣೆ ಹರಿಭಕ್ತಿ ಸಾಧನೆಗಳನ್ನು ಇವರ ಹಾಡುಗಳಲ್ಲಿ ಕಾಣುತ್ತೇವೆ

ತವರುಮನೆ ಶೂರಪಾಲಿ, ಬಹಳ ವರ್ಷಗಳವ ರೆಗೆ ಲಗ್ನವಿಲ್ಲದೆ ಕುಳಿತಿದ್ದ ಇವರು ಗಲಗಲಿ ಆಚಾ ರ್ಯರಿಗೆ ದ್ವಿತೀಯ ಪತ್ನಿಯಾಗಿ ಬಂದವರು ಸುಪ್ರ ಸಿದ್ಧ ಶ್ರೀ ನರಸಿಂಹ ಕ್ಷೇತ್ರ ಶೂರಪಾಲಿಯನ್ನು ತಮ್ಮ ಹಾಡಿನಲ್ಲಿ ವರ್ಣಿಸಿದ್ದಾರೆ.

ಪಟ್ಟವಳಿ ಅಂಚಿನ ಧಿಟ್ಟಾದ ಧೋತರ
ಬಟ್ಟಿಗುಂಗುರ ಉಡದಾರ ಶೂರಪಾಲಿ
ಕಟ್ಟಿಯವರಿಗೆ ಕೊಟ್ಟೆ ಉಡುಗೊರಿ
ಹತ್ತು ಬಟ್ಟೆಗೆ ತಕ್ಕ ಮುತ್ತಿನ ಉಂಗುರ
ಮತ್ತ ಎಲಿ ಅಡಕಿ ನಡವಿಟ್ಟು
ಶೂರಪಾಲಿ ಅರ್ಥಿಲಿ ಜೋಯ್ಸರು ಇವುಕೊಳ್ಳಿ

ಹೀಗಾಗಿ ಇವರು ಶೂರ್ಪಾಲಿಯವರಾಗಿದ್ದು, ಜೋಯಿಸರ ಮನೆತನದ ಕುವರಿಯಿರಬೇಕೆಂದು ತೋರುತ್ತಿದೆ ಇದೇ ಹಾಡಿನಲ್ಲಿ ಅಧ್ಯಾಪ ಮನಿಯ ವರು ವಿದ್ವಾಂಸರಿಗೆಲ್ಲ ಶುದ್ಧ ರತ್ನದಲೆ ರಚಿಸಿದ - ಎಂದಿರುವುದರಿಂದ ಇವರು ವೃತ್ತಿಯಿಂದ ಅಧ್ಯಾ ಪಕರಾಗಿದ್ದವರ ಮಗಳಾಗಿರಬಹುದು ಎಂದೂ ಕಾಣುತ್ತದೆ

ಇವರದು ಸುಸಂಸ್ಕೃತ ಸ್ವಭಾವ, ಆರುಜನ ವಿದ್ವಾಂಸ ಮಕ್ಕಳನ್ನು ಪಡೆದ ಇವರು ಮಕ್ಕಳೊಂ ದಿಗೆ ಶಾಸ್ತ್ರಾಭ್ಯಾಸವನ್ನು ಅಡಿಗೆ ಮಾಡುತ್ತ, ಲಾಲಿ ಸುತ್ತ ಕೇವಲ ಶ್ರವಣ ಮಾತ್ರದಿಂದ ಕಲಿತವರು. ಕೇಳಿ ಕಲಿತು ಇವರೂ ಮಹಾ ಪಂಡಿತರೇ ಆಗಿದ್ದರು.

ಬಲ್ಲಿದ ಗುರುಗಳ ಎಲ್ಲ ಹಿರಿಯರ ದಯದಿ
ಬಲ್ಲಷ್ಟು ತತ್ವ ರಚಿಸಿದೆ

ಎಂದಿದ್ದಾರೆ ಅತಿ ವಿನಯಿಗಳಾದ ಇವರು ತಮ್ಮ ಕಾವ್ಯ ಕುರಿತು-

ಮುದ್ಗಲ್ಲವಾಸನ ಶುದ್ಧ ನಾಮದವರು
ಮುದ್ದು ಪಾದಗಳ ಸ್ಮರಿಸುತ ರಚಿಸಿದ್ದ
ಅಪದ್ಧ ನೋಡದಲೆ ಹರಿಕೊಳ್ಳೊ
ಮೂಢಳು ನಾನೊಂದು ಬೇಡಿ ಬಯಸಿಕೊಂಡೆ
ಮಾಡಿದೆ ರಚನಿ ಮನ ಉಬ್ಬಿ
ರಮಿ ಅರಸು ಕೂಡಿಸೋ ನಿನ್ನವರ ಚರಣಕ್ಕೆ

- ಎಂದು ಬಿನ್ನೈಸಿದ್ದಾರೆ

ಕೊಂಗ ಬುದ್ಧಿಯನ್ನೂ ಅಷ್ಟಮದಗಳನ್ನೂ ತಂದೆ ರಾಮೇಶನ ಪಾದಕ್ಕೆ ಅರ್ಪಿಸಲು ಹೇಳುತ್ತ-

ಅಷ್ಟ ಮದವು ತಮವು ಎಂದೋ
ಕುಟ್ಟಿ ಹಿಟ್ಟು ಮಾಡಿಸಿ
ಸಿಟ್ಟುಕೋಪವೆಂದೋ ಬಣವಿ
ಒಟ್ಟಿ ಕೆಂಡ ಹೇರಿಸಿ
ಸತ್ವರಜವು ತಮವು ಎಂದೋ
ಕತ್ತಲಿಯ ಅಡಗಿಸಿ
ಮತ್ತೆ ಜ್ಞಾನಸೂರ್ಯನ
ಪ್ರಶಸ್ತ ಉದಯ ಮಾಡಿಸಿ

ಕುಲದೈವ ಪಾಂಡುರಂಗ ವಿಠ್ಠಲನಿಗೆ. ತಮ್ಮ ಹಾಡುಗಳನ್ನು ಹೀಗೆ ಉಡುಗೊರೆಯನ್ನಾಗಿಸಿ ದ್ದಾರೆ.

ಅಕ್ಕ ಕೊಲ್ಹಾಪುರ ಮುಖ್ಯಪಂಡರಾಪುರ
ಚಿಕ್ಕ ಸಾತಾರಿ ಪುಣೆಯವ
ವ್ಯೆಂಕಟಣಶಾಲು ಮುಖ್ಯಗಲಗಲಿಯವರಿಗೆ
ಉಡುಗೊರಿ ಕಂಕಣವಾಡಿ ಮುಂದ
ಡೊಂಕಾಗಿ ಹರದಾಳು
ವಂಶಿಯ ಜೋಡು ನಡವಿಟ್ಟು
ಗಲಗಲಿಯ ಮುತ್ತೈದೇರಿಗೆಲ್ಲ ಉಡುಗೊರಿ

ಪಾಂಡವರೆಲ್ಲ ಸಾಕಷ್ಟು ಕಷ್ಟ ಅನುಭವಿಸಿದ್ದನ್ನು ಅವೆಲ್ಲಕ್ಕೂ ಕಾರಣವಾದ ಕೆಟ್ಟಪ್ರಗಳನ್ನೆಲ್ಲ ತ್ಯಜಿಸಲು ಶ್ರೀಕೃಷ್ಣನ ಮೂಲಕ ತಮ್ಮ ಹಾಡಿನಲ್ಲಿ ಹೀಗೆ ಹೇಳಿ ಸುತ್ತಾರೆ

ರಂಗ ನಮ್ಮನಿಗೆ ತಾ ಬಂದ
ಮತ್ತೇನು ತಂದ || ಪ ||
ಜಗದೋದ್ಧಾರ ಸಭಿಗೆ ಬಂದ
ನಗವೋ ಪರಿಯು ಹೇಳಿದ್ದು ತಂದ
ಬಗಿ ಬಗಿ ವಸ್ತ್ರಕೊಳ್ಳಿರೆಂದ
ಪಗಡಿ ಧರ್ಮಗ ತರಲಿಲ್ಲೆಂದ
ಪಾಣಿಮಾವ ಮನಿಗೆ ಬಂದ
ಜಾಣತನವ ಹೇಳಿದ್ದು ತಂದ
ಮಾಣಿಕಮುತ್ತು ಕೊಳ್ಳಿರೆಂದ
ಕ್ಷಾಣನ ಧರ್ಮಗ ತರಲಿಲ್ಲೆಂದ
ಕೃಷ್ಣರಾಯ ಸಭಿಗೆ ಬಂದ
ಎಷ್ಟುಜಂಬ ಹೇಳಿದ್ದು ತಂದ
ಪಟ್ಟವಾಳಿ ಕೊಳ್ಳಿರೆಂದ
ಹುಟ್ಟು ಭೀಮಗ ತರಲಿಲ್ಲೆಂದ
ನಳಿನಾಕ್ಷ ಸಭಿಯೊಳು ಬಂದ
ಹೊಳವೋ ಎಷ್ಟು ಹೇಳಿದ್ದು ತಂದ
ಉಳಿಸೋ ವಸ್ತ್ರ ಕೊಳ್ಳಿರೆಂದ

ಬಳಿಯ ಪಾರ್ಥಗೆ ತರಲಿಲ್ಲೆಂದ
ರಾಜ್ಯ ಲಕ್ಷಣ ನಿನಗಿಲ್ಲೆಂದ
ಮಾಜದಾಕುಲ ಧರ್ಮಕುಂದ
ತೇಜ ಮುಂದ ಓಡಿದ್ದು ಭಂದ
ಸೋಜಿಗವೆಲ್ಲ ನಕುಲವೆಂದ
ಸುಮನಸಾರು ನಗುವ್ರೋರೆಂದ
ಭೂಮಿಯ ಕಳದ್ರೋ ಸಹದೇವ ಎಂದ
ಅಮಿತ ದನವ ಕಾಯ್ದೋಳಿಭಂದಾ
ರಮಿಯ ಅರುಸು ನಗುವನೆಂದ
ಅಂದ ಮಾತಿಗೆ ಬಲರಾಮ ಹೀಗೆಂದ
ಛಂದವಾಯಿತು ಕುಶಲವೆಂದ
ನಿಂದ್ಯವ ನೀ ಮಾಡಿಕೋ ಎಂದ
ಇಂದಿರೇಶಗ ತಿಳಿಸಿರೆಂದ

ಪಡೆನುಡಿಗಳಂತಿರುವ ಈ ಅನುಭವದ ಮುತ್ತುಗಳು "ಹಸಿದವಗೊಂದೆ ತುತ್ತು ಅಶನವ ಕೊಟ್ಟು ಅನ್ನ", "ದೆಂದ ಬಿಸಲೊಳು ಬಳಲಿ ಬಂದ ಪುರುಷಗೆ ಉದಕ", "ಕಂದಗೆ ಸ್ತನವೊಂದು ಬಿಂದು ಬಾಯಿ ಒಳಗ ಇಟ್ಟು" - ಹೀಗೆ ದಾನದೊಂದಿಗೆ ಕರ್ತವ್ಯದ ಪ್ರಜ್ಞೆಯನ್ನೂ ಎಚ್ಚರಿಸುತ್ತಾರೆ.

ಕೃಷ್ಣಾರ್ಜುನರ ಹಂಗು ಭರಿತ ಸಂಭಾಷಣೆಗಳನ್ನು ಇವರು ಹೀಗೆ ವರ್ಣಿಸುತ್ತಾರೆ-

ಒಳ್ಳೆ ವೀರನೆಂಬುವ ಮಾತು
ಸುಳ್ಳು ಕೃಷ್ಣರಾಯಾ
ಮೈಗಳ್ಳನೆಂದು ಕರೆಯೋರಲ್ಲೋ
ಅರ್ಜುನರಾಯಾ
ಯುದ್ಧ ಮಾಡೆನೆಂದು ಸನ್ನದ್ಧನಾಗಿ
ಬಂದು ಅಂಜಿ
ಗುದ್ದು ಹೊಕ್ಕಿಯಲ್ಲೋ ನೀನು
ಅರ್ಜುನರಾಯಾ
ಜರಿಯು ಸುತನು ಯುದ್ಧದಲ್ಲೆ
ಕರಿಯೆ ಅಂಜಿಕೊಂಡು ನೀನು
ಗಿರಿಯ ಮರಿಯಲ್ಲಡಗಿದೆಲ್ಲೊ
ಶ್ರೀಕೃಷ್ಣರಾಯಾ
ಸಿಟ್ಟಿನಿಂದ ಕರ್ಣ ಬಾಣಾ ಬಿಟ್ಟಾನೈಯ್ಯ
ನಿನ್ನ ಮ್ಯಾಲೆ
ಕೊಟ್ಟಿಯಲ್ಲೋ ಮುಕುಟವನ್ನ
ಅರ್ಜುನರಾಯಾ
ಹಲವು ರಾಯರೆಲ್ಲ ನಿನ್ನ ಸೆಲಿಯು
ಗಾಣದಂತೆ ಮಾಡ
ಬಲಿಯ ಹೋಗಿ ಬೇಡಿದೆಲ್ಲೊ ಶ್ರೀಕೃಷ್ಣ
ಧೀರಾಧೀರರೆಲ್ಲ ಕೂಡಿ ವೀರನೆಂದು
ಪೊಗಳಿ ನಾರಿ
ಸೀರಿ ಹ್ಯಾಂಗ ಸೆಳೆದಾನಯ್ಯ ಅರ್ಜುನ

ಶಂಬರಾರಿ ಪಿತನೆ ನಿನ್ನ ಜಂಬವೆಷ್ಟು
ಕದ್ದುಕೊಂಡು
ತಿಂದೋದಕ್ಕೆ ಜಾಣನಯ್ಯ ಶ್ರೀಕೃಷ್ಣ
ವೃಥಾಕೈತ ಧರಸಿ ಕನ್ಯೆ ಎತ್ತಿಕೊಂಡು
ಒಯ್ದುಮ್ಯಾಲ
ಹತ್ತು ಜನರು ನಗುವೋರಲ್ಲೊ
ಅರ್ಜುನರಾಯಾ

ಹೀಗೆ ಕೃಷ್ಣಾರ್ಜುನರ ಚುಚ್ಚು ಮಾತುಗಳು ರಸವತ್ತಾಗಿ ಹೊಮ್ಮಿವೆ.

ಅವ್ವನವರ ಕಾವ್ಯಗಳಲ್ಲಿ ನವರಸಗಳೆಲ್ಲ ಉಕ್ಕೇರಿ ಹರಿಯುತ್ತಿದ್ದರೂ ಅವೆಲ್ಲವೂ ಭಕ್ತಿಯ ಭಟ್ಟಿಯಲ್ಲಿ ಪಾವನತೆಯ ಪುಟಗೊಂಡೇ ಬರುತ್ತವೆ ಉಪಮೆ ಉತ್ಪ್ರೇಕ್ಷೆ ಅಲಂಕಾರ ವಕ್ರೋಕ್ತಿ, ವ್ಯಾಜ್ಯೋಕ್ತಿ ಎಲ್ಲವೂ ಅವ್ವನವರ ಕಾವ್ಯದಲ್ಲಿ ನೀತಿ ಬೋಧಕವಾಗಿ ಹರಿಪ್ರೀತಿ ಕಾರಣವಾಗಿಯೇ ದೆಳಗುತ್ತವೆ

ಸಜ್ಜನ ಸಹವಾಸದ ಮಹಿಮೆಯನ್ನು ಪಾಮರರಿಗೂ ತಿಳಿಸುವ ಅವರ ಸರಳ ಸರಸ ದೃಷ್ಟಾಂತದ ಒಂದು ನಿದರ್ಶನ-

ಭಾವಜ್ಞರ ಸಂಗ ಶಾವಿಗೆ ಉಂಡಂತೆ
ಭಾವವರಿಯದಾ ಪಾಮರರ
ಸಹವಾಸ ದೇವಿನ ಹಾಲು ಕುಡಿದಂತೆ

ಅವ್ವನವರೂ ಪತಿ ಮಕ್ಕಳೊಂದಿಗೆ ದೇರೆ ದೇರೆ ಸ್ಥಳಗಳಲ್ಲಿಯ ವಿದ್ವತ್ ಗೋಷ್ಠಿಗಳಿಗೆ ಹೋಗುತ್ತಿದ್ದರು ಉತ್ತರಾದಿ ಮಠದ ಅಂದಿನ ಶ್ರೀಗಳಾಗಿದ್ದ ಸತ್ಯಪೂರ್ಣತೀರ್ಥರು ಆಸ್ಥಾನ ವಿದ್ವಾಂಸರೆಂದು ಅವ್ವನವರ ಪತಿ ಗಲಗಲಿ ಮುದ್ಗಲಾಚಾರ್ಯರಿಗೆ ವಿಶೇಷ ಮನ್ನಣೆ ಮಾಡಿ ಅನುಗ್ರಹಿಸಿದ್ದರು. ಇವರನ್ನೂ ಅಷ್ಟೇ ಗೌರವಿಸುತ್ತಿದ್ದರು

ಹೀಗೆಯೇ ಒಂದು ವಿದ್ವತ್ ಸಭೆ ಪೇಶ್ವೆ ಆಡಳಿತ ಕಾಲದಲ್ಲಿ ಪೂಣೆಯಲ್ಲಿ ಜರುಗಿತ್ತು ಉತ್ತರ ದಕ್ಷಿಣ ಭಾರತಗಳಿಂದ ಸುಪ್ರಸಿದ್ಧ ಪಂಡಿತರು ಆಗಮಿಸಿದ್ದರು ಅವ್ವನವರೂ ಪರಿವಾರ ಸಮೇತ ಭಾಗಿಗಳಾಗಿದ್ದರು

ಕಾಶಿ ಪಂಡಿತರೊಂದಿಗೆ ಇವರ ಮಕ್ಕಳ ವಾಕ್ಯಾರ್ಥ ವಾಗ್ವಾದಗಳು ಭರಾಟೆಯಿಂದ ಸಾಗಿದ್ದವು. ಮಧ್ಯದಲ್ಲಿ ಕಾಶಿ ಪಂಡಿತರ ಒಂದು ಪ್ರಮೇಯಕ್ಕೆ ಉತ್ತರಿಸುವಲ್ಲಿ ಗಲಗಲಿಯವರು ತಡವರಿಸುತ್ತಿದ್ದಾಗ, ರಾಣಿವಾಸದವರೊಂದಿಗೆ ವೀಕ್ಷಿಸುತ್ತ ಆಲಿಸುತ್ತ ಕುಳಿತಿದ್ದ ಅವ್ವನವರು ತಟ್ಟನೇ ಆ ಪ್ರಶ್ನೆಗೆ ಉತ್ತರ ಹೇಳಿದ್ದಲ್ಲದೆ, ಮುಂದೆ ಅವರು ಕೇಳಬಹುದಾಗಿದ್ದ ಮರುಪ್ರಶ್ನೆ ಕೂಡ ಹೇಳಿ ಆ ಮಹಾಪಂಡಿತರನ್ನು ಮೂಕರನ್ನಾಗಿಸಿದರು.

ಹೀಗೆ ದಕ್ಷಿಣಭಾರತದ ಪಂಡಿತರಿಗೆ ಜಯವನ್ನು ರಕಿಸಿಕೊಟ್ಟಿದ್ದಕ್ಕೆ ಪೇಶವೆ ಸಂತಸಗೊಂಡು ಸ್ವರ್ಣ ನಾಣ್ಯ ಹಾಗೂ ವರ್ಷಾಶನ ಹಾಕಿ ಕೊಟ್ಟನು.ಇದು ತೀರ ಇತ್ತೀಚಿನವರೆಗೂ ಅವರ ಸದ್ವಂಶದ ಪಂಡಿತ ಪೀಳಿಗೆಗೂ ದೊರೆತಿದೆ.

ಇವರ ಖ್ಯಾತಿ ದೆಳೆದಂತೆ ದೇರೆ ದೇರೆ ಸ್ಥಳಗಳಲ್ಲೂ ಮಾನ ಸನ್ಮಾನಗಳು ದೊರೆತವು.

ಮೈಸೂರು ಒಡೆಯರೂ ಇವರ ಪಾಂಡಿತ್ಯ ವೈರಾಗ್ಯ ಸಾಹಿತ್ಯರಚನೆಗಳನ್ನು ಕೇಳಿ, ಇವರನ್ನು ಆಸ್ಥಾನಕ್ಕೆ ಮರ್ಯಾದೆಯಿಂದ ಆಮಂತ್ರಿಸಿ ಸನ್ಮಾನಿಸಿದ್ದಾರೆ.

ಇವರೊಂದಿಗೆ ಇವರ ಶಿಷ್ಯ ಭಾಗಮ್ಮ ಸದಾ ಇರುತ್ತಿದ್ದರು. ಪ್ರಯಾಗಮ್ಮ ಅಂಕಿತದಿಂದ ಪ್ರಸಿದ್ಧರಾದ ಇವರು ಅವ್ವನವರೊಂದಿಗೆ ಕಾಶಿಯಲ್ಲಿ ವಾಸಿಸುತ್ತಿದ್ದಾಗ ರೋಗ ಪೀಡಿತರಾಗಿದ್ದು, ಅವ್ವನವರ ಆಜ್ಞಾನುಸಾರ ಕನ್ನಡ ಭಾಗವತ ತೃತೀಯ ಸ್ಕಂಧ ರಚಿಸಿ ರೋಗ ಮುಕ್ತರಾದರು

ಭಕ್ತಿಯಿಂದ ಇವರನ್ನು ಸ್ತುತಿಸಿದ್ದಾರೆ-

ಏಸು ಜನ್ಮದ ಪುಣ್ಯವಾಸವಾಯಿತೋ
ವಿಷ್ಣುದಾಸರ ದಾಸಿ ನಾನಾದೆ
ಈ ಸಂಸಾರ ಕ್ಲೇಶವ ಕಳೆದು
ಸುವಾಸನೆಯ ಕೊಡು ಗುರುರಾಜ

ಸಂಸ್ಕೃತ ವಿದ್ವಾಂಸರ ಶಾಸ್ತ್ರಸಂಪನ್ನರ, ವೇದಪಾರಂಗತರ ಮನೆಯ ಹೆಣ್ಣುಮಗಳು ಕನ್ನಡದಲ್ಲಿ ಕೃತಿರಚಿಸಿದ್ದಲ್ಲದೆ, ಅಂದಿನ ಸಾಮಾಜಿಕ ಅಸಮಾನ ಪರಿಸರದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ವಹಿಸಿದ್ದು ಹೆಗ್ಗಳಿಕೆಯೇ ಸೈ.

ಉತ್ತರ ಕರ್ನಾಟಕದ ಕೆಲವೆಡೆಗಳಲ್ಲಿ ಇಂದಿಗೂ ಇವರ ಮುಯ್ಯ ಹಾಡು, ಸೇತುಬಂಧನದ ಹಾಡುಗಳನ್ನು ಹಬ್ಬ ಹರಿದಿನಗಳಲ್ಲಿ ಶ್ರದ್ಧೆ ಭಕ್ತಿಯಿಂದ ಹಾಡುತ್ತಿರುತ್ತಾರೆ.

ಹೀಗೆ, ದಾಸ ಸಾಹಿತ್ಯದ ದ್ವಿತೀಯ ಘಟ್ಟದಲ್ಲಿ ಗಲಗಲಿ ಅವ್ವನವರಿಂದ ದಾಸಸಾಹಿತ್ಯ ಸ್ಲೇಪೆ ಮುಂದುವರೆಯಿತೆಂದು ತಿಳಿದು ಬರುತ್ತದೆ



# ನಾಣ್ಯಗಳಲ್ಲಿ ಆಂಜನೇಯ

ಆದ್ಯರಾಮಾಚಾರ್ಯ.

ಹತ್ತನೆಯ ಶತಮಾನದಲ್ಲಿ ಉತ್ತರ ಭಾರತದಲ್ಲಿ ಆಂಜನೇಯ ಬಹು ಪ್ರಿಯ ದೇವನಾಗಿದ್ದ. ಆದರೆ ಅದಕ್ಕೂ ಮೊದಲೇ ಹತ್ತನೇ ಶತಮಾನಕ್ಕಿಂತಲೂ ಹಿಂದಿನದೆನ್ನುವ ಅನೇಕ ಆಂಜನೇಯನ ವಿಗ್ರಹಗಳೂ ಉತ್ತರ ಭಾರತದಲ್ಲಿ ದೊರೆತಿವೆ ಅವುಗಳಲ್ಲಿ ಶ್ರೀರಾಮ ಪಂಚಾಯತನದಲ್ಲಿ ಹನುಮಂತನ ವಿಗ್ರಹವಿರುವುದನ್ನು ನಾವು ಕಾಣಬಹುದು. ಬುಂದೇಲಖಂಡದಿಂದ ಛತ್ತೀಸ್‌ಗಢದವರೆಗಿನ ಪ್ರದೇಶದಲ್ಲಿ ಹನುಮಂತನ ಅನೇಕ ಸ್ವತಂತ್ರ ಮೂರ್ತಿಗಳು ಹಾಗೂ ಚಲಾವಣೆಗೆ ಬಳಸಿದ ಆಂಜನೇಯನ ಚಿತ್ರವಿರುವ ನಾಣ್ಯಗಳು ಸಾಕಷ್ಟು ಪ್ರಮಾಣದಲ್ಲಿ ದೊರೆತಿವೆ. ಖಜುರಾಹೋದಲ್ಲಿರುವ ಒಂದು ಮಠದಲ್ಲಿ ಏಳೂವರೆ ಅಡಿ ಎತ್ತರವಿರುವ ಆಂಜನೇಯನ ವಿಗ್ರಹವನ್ನು ಇಂದಿಗೂ ಪೂಜಿಸುತ್ತಲಿದ್ದಾರೆ ತಳಭಾಗದಲ್ಲಿ ಸಂವತ್ಸರ ಮುನ್ನೂರಾ ಆರು ಎಂಬ ಲಿಖಿತವು ಕಾಣಸಿಗುತ್ತದೆ. ಅದನ್ನು ಗಮನಿಸಿದಾಗ ಈ ವಿಗ್ರಹವು ೯೭೯ ವಿಕ್ರಮ ಸಂವತ್ಸರ ಅಥವಾ ಸನ್ ೯೫೨ ನೇ ಇಸ್ವಿಯ ದ್ದಾಗಿರಬಹುದೆಂದು ಭಾವಿಸಲಾಗುತ್ತದೆ ದ್ವಿಭುಜಯುಕ್ತ ಹನುಮಂತನು ಒಂದು ಕೈ ಸೊಂಟದ ಮೇಲಿಟ್ಟುಕೊಂಡಿದ್ದು, ಇನ್ನೊಂದು ಹಸ್ತವನ್ನು ಮೇಲೆತ್ತಿದ್ದಾನೆ ಮುಖದಲ್ಲಿ ಒಳ್ಳೇ ಉತ್ಸಾಹದ ಕಳೆಯು ಎದ್ದು ತೋರುತ್ತದೆ ಕೊರಳಲ್ಲಿ ಕೇಯೂರ ಹಾರವಿದೆ. ಸಿಂಧೂರ ಲೇಪನದಿಂದಾಗಿ ಇನ್ನುಳಿದ ಕುಸುರಿನ ಕೆಲಸಗಳು ಕಾಣದಂತಿದೆ.

ಸ್ವತಂತ್ರ ಶಿಲಾವಿಗ್ರಹಗಳ ನಂತರ ಹನುಮಂತನ ಆಕೃತಿಗಳುಳ್ಳ ನಾಣ್ಯಗಳು ಛತ್ತೀಸಗಡದ ರತ್ನಪುರದಲ್ಲಿ ಕಲಚೂರಿ ವಂಶದ ಕಮಲರಾಜನ ಕಾಲದಲ್ಲಿ ಈ ನಾಣ್ಯಗಳು ಬಳಕೆಯಲ್ಲಿದ್ದಂತೆ ತೋರುತ್ತವೆ. ಮುಂದೆ ಹನ್ನೊಂದನೇ ಶತಮಾನದಲ್ಲಿ ಅದೇ ವಂಶದ ಮೊದಲನೇ ಜಾಜ್ವಲ್ಯದೇವ ಹಾಗೂ ಪೃಥ್ವಿದೇವ ಇವರಿಬ್ಬರೂ ತಮ್ಮ ಪೂರ್ವಜರಂತೆ ತಾಮ್ರದ ನಾಣ್ಯಗಳ ಮೇಲೆ ಹನುಮಂತನ ಚಿತ್ರಗಳನ್ನು ಬಳಸಿರುವುದು ಕಂಡುಬರುತ್ತದೆ ಈ ಚಿತ್ರದಲ್ಲಿ ಹನುಮಂತನು ಪಾದತಲದಲ್ಲಿ ರಾಕ್ಷಸನನ್ನು ತುಳಿಯುತ್ತಿದ್ದಂತೆ ಬಿಡಿಸಲಾಗಿದೆ ಇಲ್ಲಿಯೂ ಸಹ ಆತನು ದ್ವಿಭುಜಯುಕ್ತನಾಗಿದ್ದಾನೆ ಪೃಥ್ವಿದೇವನ ಕಾಲದ ಕೆಲವುನಾಣ್ಯಗಳಲ್ಲಿ ಚತುರ್ಭುಜ ಹನುಮಂತನ ಚಿತ್ರವು ಕಾಣಬರುತ್ತದೆ ಬಲಗೈಯಲ್ಲಿ ಗದೆ, ಎಡಗೈ ರಾಕ್ಷಸನನ್ನು ಮರ್ದನ ಮಾಡುವ ಚಿತ್ರವಿದೆ ಇದೇ ರೀತಿಯಲ್ಲಿ ಚಂದೇಲ್ ರಾಜ ಮನೆತನದವರು ಬಳಸಿದ ನಾಣ್ಯಗಳಲ್ಲಿ ಹನುಮಂತನ ಚಿತ್ರಗಳಿವೆ. ಈ ಮನೆತನದ ಸಲ್ಲಕ್ಷಣವರ್ಮನ ಕಾಲದಲ್ಲಿ ಈ ನಾಣ್ಯಗಳು ಬಳಕೆಯಲ್ಲಿದ್ದವೆಂದು ತಿಳಿದುಬರುತ್ತದೆ ಮುಂದೆ ಜಯವರ್ಮ, ಪೃಥ್ವೀವರ್ಮ,



ಮದನವರ್ಮರ ಕಾಲದವರೆಗೂ ಈ ನಾಣ್ಯಗಳು ಚಲಾವಣೆಯಲ್ಲಿದ್ದವು. ಖಜುರಾಹೋದ ಮಠದಲ್ಲಿ ಇಂದಿಗೂ ಕೆಲವು ಹನುಮಂತನ ನಾಣ್ಯಗಳನ್ನು ಕಾಣಬಹುದಾಗಿದೆ. ಪ್ರತೀಹಾರದ ನರೇಶ ಮಹಿಷಭೋಜನ ಕಾಲದಲ್ಲಿ ವರಾಹ ಲಾಂಛನ ನಾಣ್ಯಗಳಿದ್ದುದನ್ನು ತೋರಿಸುತ್ತಾರೆ.

ಹನುಮಂತನ ಚಿತ್ರವನ್ನು ನಾಣ್ಯಗಳ ಮೇಲೆ ಬಿಡಿಸಲು ಏನಾದರೂ ಕಾರಣವಿರಬಹುದೇ? ಈ ಪರಂಪರೆಯ ಮೂಲ ಯಾವುದು? ಎಂದು ಯೋಚಿಸತೊಡಗಿದಾಗ ಕಲಚೂರಿಯ ಅರಸು ಕಲಿಂಗರಾಜ ಅಥವಾ ಆತನ ಪುತ್ರ ಕಮಲರಾಜ ಇವರಿಬ್ಬರೂ ಚಾಂದೇಲಿ ರಾಜಮನೆತನದವರಿಗಿಂತ ಪೂರ್ವದಲ್ಲಿಯೇ ಹನುಮಂತನ ಚಿತ್ರವಿದ್ದ ನಾಣ್ಯಗಳನ್ನು ಚಲಾವಣೆಯಲ್ಲಿ ತಂದಿದ್ದರು. ಕಲಚೂರಿ ಹಾಗೂ ಚಾಂದೇಲ ಮನೆತನದಲ್ಲಿ ನೆರೆಹೊರೆಯ ಸಂಬಂಧವಿದ್ದುದರಿಂದ ಈ ಎರಡೂ ರಾಜ್ಯಗಳಲ್ಲಿ ಶ್ರೀರಾಮದೂತ ಆಂಜನೇಯನ ಆರಾಧನೆಯು ಅವ್ಯಾಹತವಾಗಿ ನಡೆದುಬಂದಿರುವ ಸಾಧ್ಯತೆಗಳಿರಬಹುದೆನಿಸುವುದು.

ಮೇಲೆ ವಿವರಿಸಿದ ಈ ಎರಡೂ ರಾಜ ಮನೆತನದವರಂತೆ ದಕ್ಷಿಣದಲ್ಲಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಹಾಗೂ ದೇವಗಿರಿಯ ಯಾದವರು (ಇವರಂತೂ ದ್ವಾರಾವತಿಪುರ ನರೇಶ್ವರ ವಿಷ್ಣು ವಂಶೋದ್ಭವರೆಂಬ ಅಂಕಿತವುಳ್ಳವರಾಗಿದ್ದರು) ಈ ಪ್ರಾಂತಗಳಲ್ಲಿಯೂ ಸಹ ಆಂಜನೇಯನ ಆರಾಧನೆಯೊಂದಿಗೆ ಗರುಡ ಹಾಗೂ ವರಾಹ ಮೂರ್ತಿಗಳ ಪೂಜೆ ವಿಶೇಷವಾಗಿ ನಡೆದುದಕ್ಕೆ ಆಧಾರಗಳಿವೆ. ಧೃಡಪ್ರಹಾರರಾಜನ ಕಾಲವನ್ನು ನಿರ್ಧರಿಸಲು ಬೇರೆ ಯಾವ ಆಧಾರಗಳಿಲ್ಲವಾದರೂ ಒಂಬತ್ತನೇ ಶತಮಾನದ ಉತ್ತರಾರ್ಧವು ಈತನ ಕಾಲವೆಂದು ಗುರುತಿಸಲಾಗುತ್ತಿದೆ. ಕರ್ನಾಟಕ ಪ್ರದೇಶವಂತೂ ಶ್ರೀರಾಮ ಭಕ್ತನಾದ ಆಂಜನೇಯನ ಕೇಂದ್ರಸ್ಥಾನವೆನಿಸಿಕೊಂಡಿದೆ. ಪತ್ನಿಯನ್ನು ಕಳೆದುಕೊಂಡು ವಿರಹಿಯಾಗಿ ಸಂಚರಿಸುತ್ತಿದ್ದ ಶ್ರೀರಾಮಚಂದ್ರನಿಗೆ ಆಂಜನೇಯನ ಸಹವಾಸದಿಂದ ಸುಗ್ರೀವನ ಸಖ್ಯ ಲಭಿಸಿ ಮುಂದೆ ಆತನು ಸಮುದ್ರೋಲ್ಲಂಘನ ಮಾಡಿ ಸೀತಾಮಾತೆಯೊಂದಿಗೆ ಶ್ರೀರಾಮಚಂದ್ರಪ್ರಭು ಅಯೋಧ್ಯಾ ನಗರವನ್ನು ತಲುಪುವವರೆಗೆ ಹನುಮಂತನ ಪಾತ್ರವು ಬಹು ಮಹತ್ವಪೂರಿತವಾದುದಾಗಿದೆ. ಕನ್ನಡದ ಜನತೆ ಹನುಮ ಹಾಗೂ ಗರುಡ ಇವರಿಬ್ಬರ ಚಿತ್ರಗಳನ್ನು ಪ್ರತಿಯೊಂದು ಮನೆಯ ಹೊರಭಾಗದಲ್ಲಿ ಅಲಂಕೃತ ರೀತಿಯಲ್ಲಿ ಬಿಡಿಸುತ್ತಿದ್ದರು. ಪ್ರತಿ ಗ್ರಾಮಕ್ಕೂ ಗ್ರಾಮದೇವನೆಂದು ಆಂಜನೇಯನು ಇಂದಿಗೂ ಪೂಜೆಗೊಳ್ಳುವುದುಂಟು. ಹಿಂದಿನ ಕಾಲದಲ್ಲಿ ರತ್ನಪುರ, ಛತ್ತೀಸಗಡ, ಕಲಚೂರಿ ರಾಜರ ಸಂಪರ್ಕವು ಕರ್ನಾಟಕ ಪ್ರದೇಶದೊಂದಿಗಿತ್ತು. ಉದಾಹರಣೆಯಾಗಿ ಸೇವುಣ ದೇಶದ ಸಮೀಪವರ್ತಿ ದಂಡಕಪುರದ ರಾಜ ಕಲಚೂರಿ ನೃಪತಿ ಮೊದಲನೇ ಜ್ವಾಜ್ವಲ್ಯದೇವನ ಆಳ್ವಿಕೆಯಲ್ಲಿ ಆಂಜನೇಯನ ಅಥವಾ ಹನುಮಂತನ ಆರಾಧನೆಯನ್ನು ನೀಡಬಹುದು. ನಾಣ್ಯಗಳ ಮೇಲೆ ಆತನ ಮುದ್ರಿಕೆಗಳಿಗೆಲ್ಲ ಕನ್ನಡನಾಡಿನ ವೀರಾಧಿವೀರವೆನಿಸಿದ ಹನುಮಂತನ ಜೀವನವೇ ಆ ರಾಜರಿಗೆಲ್ಲ ಆದರ್ಶಪ್ರಾಯವಾಗಿ ಪರಿಣಮಿಸಿ ಮದರಲ್ಲಿ ಯಾವ ಸಂದೇಹವೂ ಇಲ್ಲ.

* * *

# ಶಾಸನಾಸಕ್ತರಿಗೆ ಸುವರ್ಣಾವಕಾಶ





ತಿರುಮಲೆ - ತಿರುಪತಿ ದೇವಸ್ಥಾನಗಳ ಇತಿಹಾಸವನ್ನು ಗುರುತಿಸುವ ತನ್ಮೂಲಕವಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ವಾತಾವರಣದ ಪರಿಚಯ ಪಡೆಯಲು ಅನುಕೂಲವಾಗುವ ತಿರುಮಲೆ - ತಿರುಪತಿ ದೇವಸ್ಥಾನಗಳ ಶಾಸನ ಸಂಪುಟಗಳು ಪುನರ್ಮುದ್ರಿತವಾಗಿ ಪ್ರಕಟವಾಗಿವೆ. ಇವುಗಳು ಆರು ಸಂಪುಟಗಳಲ್ಲಿದ್ದು ಏಳನೆಯ ಸಂಪುಟ ಶಾಸನನಾಮ ಸೂಚಿಯಾಗಿದ್ದು ಜೊತೆಗೇ ಒಂದು ರಿಪೋರ್ಟ್ ಸಂಪುಟ ಸಹ ಸೇರಿದೆ. ತಿ. ತಿ. ದೇವಸ್ಥಾನಗಳ ಅಂದಿನ ಶಾಸನ ತಜ್ಞಖ್ಯಾತ ವಿದ್ವಾಂಸ ಸಾಧು ಸುಬ್ರಹ್ಮಣ್ಯಶಾಸ್ತ್ರಿಗಳಿಂದ ಸಂಕಲನಗೊಂಡಿರುವ ಆಂಗ್ಲಭಾಷೆಯ ವಿವರಣೆಯಿರುವ ಈ ಶಾಸನ ಸಂಪುಟಗಳ ವಿವರ ಹೀಗೆ -

1. ಎಪಿಗ್ರಾಫಿಕಲ್ ರಿಪೋರ್ಟ್ (ತಿ.ತಿ.ದೇ. ಶಾಸನಗಳ ಬಗ್ಗೆ)
   ಸಾಧು ಸುಬ್ರಹ್ಮಣ್ಯಶಾಸ್ತ್ರೀ. ರೂ. 145-00
   (ಸಾವಿರಕ್ಕೂ ಹೆಚ್ಚಿನ ಶಾಸನಗಳ ಸ್ಥೂಲ ಚಿತ್ರಣ, ವಿವರಣೆ)
2. ಅರ್ಲಿ ಇನ್ಸ್‌ಕ್ರಿಪ್ಷನ್ಸ್ (1)
   ಸಂಪಾದನೆ - ಅನುವಾದ : ಸಾಧುಸುಬ್ರಹ್ಮಣ್ಯಶಾಸ್ತ್ರೀ.
   (236 ಪ್ರಾಚೀನ ಕಾಲದ ಶಾಸನಗಳ ಬಗ್ಗೆ ಮೂಲ, ಅನುವಾದ ವಿವರಣೆಗಳನ್ನು ಹೊಂದಿದೆ.)
   ರೂ. 100-00
3. ಇನ್ಸ್‌ಕ್ರಿಪ್ಷನ್ಸ್ ಆಫ್ ಸಾಳುವ ನರಸಿಂಹಾಸ್ ಟೈಮ್ (2)
   (1445 ರಿಂದ 1504)
   (356 ಶಾಸನಗಳು - ಸಾಳುವ ನರಸಿಂಹನ ಕಾಲದವು)
   ಅನುವಾದ - ಸಾಧು ಸುಬ್ರಹ್ಮಣ್ಯಶಾಸ್ತ್ರೀ ರೂ. 120-00
   ಸಂಪಾದನೆ - ವಿ. ವಿಜಯರಾಘವಾಚಾರ್ಯ.
4. ಇನ್ಸ್‌ಕ್ರಿಪ್ಷನ್ಸ್ ಆಫ್ ಕೃಷ್ಣರಾಯಾಸ್ ಟೈಮ್ (3)
   (1509 ರಿಂದ 1531)
   (400 ಶಾಸನಗಳು - ಶ್ರೀಕೃಷ್ಣದೇವರಾಯನ ಕಾಲದವು)
   ಅನುವಾದ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ. 125-00
5. ಇನ್ಸ್‌ಕ್ರಿಪ್ಷನ್ಸ್ ಆಫ್ ಅಚ್ಯುತರಾಯಾಸ್ ಟೈಮ್ (4)
   (1530 ರಿಂದ 1542)
   (ಅಚ್ಯುತರಾಯನ ಕಾಲದ 378 ಶಾಸನಗಳ ವಿವರವಿದೆ.)
   ಅನುವಾದ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ. 130-00
6. ಇನ್ಸ್‌ಕ್ರಿಪ್ಷನ್ಸ್ ಆಫ್ ಸದಾಶಿವರಾಯಾಸ್ ಟೈಮ್ (5)
   (1541 ರಿಂದ 1574)
   (ಸದಾಶಿವರಾಯನ ಕಾಲದ 473 ಶಾಸನಗಳ ವಿವರವಿದೆ.)
   ಅನುವಾದ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ. 150-00
7. ಇನ್ಸ್‌ಕ್ರಿಪ್ಷನ್ಸ್ ಆಫ್ ವೆಂಕಟಪತಿರಾಯಾಸ್ ಟೈಮ್ (6)
   (1561 ರಿಂದ ವೆಂಕಟಪತಿರಾಯನ ಕಾಲದ ಹಾಗೂ ನಂತರದ 252 ಶಾಸನಗಳ ವಿವರವಿದೆ.)
   ಅನುವಾದ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ. 100-00
8. ಎಪಿಗ್ರಾಫಿಕಲ್ ಗ್ಲಾಸೂರಿ ಆನ್ ಟಿ.ಟಿ.ಡಿ. ಇನ್ಸ್‌ಕ್ರಿಪ್ಷನ್ಸ್ (7)
   (ಕ್ರಿ.ಶ. 830 ದಿಂದ 1690 ವರೆಗಿನ ಶಾಸನ ಸೂಚಿ, ವಂಶವೃಕ್ಷಗಳೊಡನೆ)
   ಸಂಕಲನ - ಸಂಪಾದನೆ - ವಿ. ವಿಜಯರಾಘವಾಚಾರ್ಯ.
   ರೂ. 120-00
9. ತಿರುಪತಿ ವೆಂಕಟೇಶ್ವರ - ಸಾಧುಸುಬ್ರಹ್ಮಣ್ಯಶಾಸ್ತ್ರೀ
   (ಶಾಸನಾಧಾರದಲ್ಲಿ ಆಲಯ ಚರಿತ್ರೆಯ ವಿವರ)
   ರೂ. 100-00

ಎಲ್ಲ ಪುಸ್ತಕಗಳೂ ಮೂಲ ಶಾಸನ ಭಾಷೆಯೊಡನೆ ಆಂಗ್ಲ ವಿವರಣೆ ಹೊಂದಿರತಕ್ಕವು. ಎಲ್ಲ ಪ್ರತಿಗಳೂ ಉತ್ತಮ ಕ್ಯಾಲಿಕೋ ಪ್ರತಿಗಳೇ. ಎಲ್ಲ ಪುಸ್ತಕಗಳ ಒಂದೊಂದು ಪ್ರತಿ ಕೊಂಡವರಿಗೆ 30 ಶತಾಂಶ ರಿಯಾಯಿತಿ ಉಂಟು. ನಮ್ಮ ಪುಸ್ತಕ ಪ್ರದರ್ಶನ ಮಾರಾಟ ಶಾಲೆಗಳಲ್ಲಿ 25 ಶತಾಂಶ ರಿಯಾಯಿತಿ ಇದೆ. ಅಂಚೆವೆಚ್ಚ ಪ್ರತ್ಯೇಕ. ವಿ.ಪಿ.ಪಿ ಇಲ್ಲ. ಡಿ.ಡಿ. ಗಳನ್ನು ಮಾತ್ರ ಸ್ವೀಕರಿಸಲಾಗುವುದು.

ಕೂಡಲೇ ಬರೆಯಿರಿ.

**ಪೌರಸಂಬಂಧಾಧಿಕಾರಿ,**
ತಿ.ತಿ.ದೇ. ಗ್ರಂಥ ಮಾರಾಟ ವಿಭಾಗ,
ತಿ.ತಿ.ದೇ., ತಿರುಪತಿ - 517 507.

# ಧರ್ಮಸೂತ್ರಗಳು

- 'ರಘುಸುತ'.

ಮಾನವನಜೀವನಕ್ಕೆ ಸಂಬಂಧಪಟ್ಟಂತೆ ಪ್ರಾಚೀನ ಕಾಲದಿಂದಲೂ ಕೆಲವೊಂದು ನಿರ್ಬಂಧಗಳಿದ್ದುವು. ಅವನು ಕ್ರಮಬದ್ಧವಾದ ಜೀವನವನ್ನು ನಡೆಸಬೇಕಾದರೆ ಯಾವ ಯಾವ ನಿಯಮಗಳನ್ನು ಅನುಸರಿಸಬೇಕು ಎಂಬುದನ್ನು ಅಂದಿನ ಹಿರಿಯರು ರೂಪಿಸಿದರು. ಇದನ್ನೆ ಧಾರ್ಮಿಕರೀತಿ ಎಂದು ಕರೆದರು. ಬೇರೆಯವರಿಗೆ ತೊಂದರೆಯಾಗದಂತೆ ನಡಾವಳಿಗಳನ್ನು ಅನುಸರಿಸುವುದೇ ಧರ್ಮಮಾರ್ಗ. ಇದನ್ನು ನಿಯಮಾವಳಿಗಳ ಮುಖಾಂತರ ಅನುಸರಿಸಲು ರೂಪಿಸಲಾದ ನಿಯಮಗಳೇ ಸೂತ್ರಗಳು. ಇವೇ ಧರ್ಮಸೂತ್ರಗಳು. ಇವು ಸರ್ವಜನ ಸಮ್ಮತವಾಗಿದ್ದು, ಸಮಾಜಕ್ಕೆ ವಿಹಿತವಾಗಿದ್ದುದರಿಂದ ಇವು ಸಾಮಾಜಿಕಗಳೂ ಆದುವು. ಈ ರೀತಿಯಲ್ಲಿ ಭಾರತೀಯ ಜೀವನವು ತುಂಬಾ ಕಟ್ಟುನಿಟ್ಟಿನ ಜೀವನವಾಗಿದ್ದು, 'ಸರ್ವೇ ಜನಾಃ ಸುಖಿನೋ ಭವಂತು' ಎನ್ನುವುದಕ್ಕೆ ತಕ್ಕಂತಿತ್ತು. ಇದು ಧಾರ್ಮಿಕ ಜೀವನದ ತಳಹದಿಯಾಯಿತು. ಈ ನಿಯಮಗಳಿಗೆ ಅನುಸಾರವಾಗಿ ನಡೆದುಕೊಳ್ಳುತ್ತಿದ್ದುದರಿಂದಲೇ ಭಾರತೀಯ ಸಂಸ್ಕೃತಿಯೂ ಇಂದಿನವರೆಗೂ ಉಳಿದುಬರಲು ಸಾಧ್ಯವಾಯಿತು. ವೇದ, ವೇದಾಂಗಗಳು ಧಾರ್ಮಿಕ ಜೀವನಕ್ಕೆ ಆಧಾರಗ್ರಂಥಗಳಾದುವು. ಆದರೆ ಜನಸಾಮಾನ್ಯರಿಗಾಗಿ ರೂಪುಗೊಂಡ ನಿಯಮಗಳು ಧರ್ಮಸೂತ್ರಗಳಾಗಿ ರೂಢಿಗೆ ಬಂದುವು. ಇವು ಹೆಚ್ಚಾಗಿ ಗೃಹ್ಯಸೂತ್ರಗಳಿಗೆ ಹೊಂದಿಕೊಂಡಿದ್ದರಿಂದ ಅನೇಕ ಸಂಸ್ಕಾರಗಳು ಗೃಹಕ್ಕೆ ಸಂಬಂಧಪಟ್ಟಿದ್ದಾಗಿದ್ದು, ಸಮಾಜವೇ ಬಂದು ಗೃಹ ಎಂಬ ಹೇಳಿಕೆಯು ರೂಢಿಗೆ ಬಂದಿತು. ಈ ರೀತಿಯಲ್ಲಿ ಗೃಹ್ಯಸೂತ್ರಗಳು ಪ್ರಾಚೀನ ಭಾರತೀಯ ಜೀವನದ ಆಳವಾದ ನೋಟವನ್ನು ನೀಡುವ ಒಂದು ಜಾನಪದ ಗ್ರಂಥವೆನಿಸಿಕೊಂಡಿತು.

ಈ ಸೂತ್ರಗಳು ಹೀಗೆ ಮಾನವ ಜೀವನದ ಮಾರ್ಗದರ್ಶಿಗಳಾಗಿ, ಪ್ರಾರಂಭದಲ್ಲಿ ಮೌಖಿಕವಾಗಿ, ನಂತರ ಗ್ರಂಥರೂಪಕ್ಕೆ ಬಂದುವು. ಹೀಗೆ ಗ್ರಂಥಸ್ಥಮಾಡುವಾಗ, ಯಾರು ಗ್ರಂಥರೂಪದಲ್ಲಿ ನೀಡಿದರೂ ಅವರ ಹೆಸರನ್ನೇ ಆ ಕೃತಿಗೆ ಇಡಲಾಯಿತು. ಹೀಗಾಗಿ ಗೌತಮಧರ್ಮ ಸೂತ್ರ, ಆಪಸ್ತಂಭ ಧರ್ಮಸೂತ್ರಗಳು ಬೆಳಕಿಗೆ ಬಂದುವು.

ಈ ಧರ್ಮಸೂತ್ರಗಳು ತುಂಬಾ ಪ್ರಾಚೀನವಾದುವೆಂದೂ, ನಂತರ ವಿಸ್ತೃತ ರೂಪದಲ್ಲಿ ಇವೇ ಧರ್ಮಶಾಸ್ತ್ರಗಳಾದುವೆಂದೂ ಹೇಳಲಾಗುತ್ತದೆ. ಆದರೆ ಕೆಲವು ಧರ್ಮಸೂತ್ರಗಳಲ್ಲಿ ಮನು ಮುಂತಾದ ಸೂತ್ರಕಾರರ ಹೆಸರುಗಳು ಬಂದಿರುವದರಿಂದ ಇದು ಅಷ್ಟು ಸಮಂಜಸವಲ್ಲ ಎಂದೆನಿಸುತ್ತದೆ. ಹೀಗಾಗಿ 'ಧರ್ಮ ಸೂತ್ರ'ಗಳಲ್ಲಿ ಕೆಲವು ಮುಂಚೆಯೇ ರಚಿತವಾಗಿದ್ದರೂ ಕಾಲಾಂತರದಲ್ಲಿ ಸಮಸಮನಾಗಿ ಧರ್ಮಸೂತ್ರಗಳೂ, ಧರ್ಮಶಾಸ್ತ್ರಗಳೂ ನಿರ್ಮಾಣ ಆಗಿರಬಹುದು ಎಂದೆನ್ನಿಸುತ್ತದೆ. ಗಮನವಿಟ್ಟು ನೋಡಿದಲ್ಲಿ ಧರ್ಮಸೂತ್ರಗಳು ಹಾಗೂ ಗೃಹ್ಯಸೂತ್ರಗಳಲ್ಲಿ ತದ್ರೂಪಗಳಾಗಿರುವುವೂ ಕಂಡುಬರುತ್ತವೆ. ಇದೇ ರೀತಿಯಲ್ಲಿ ಧರ್ಮಸೂತ್ರಗಳಿಂದ ಸ್ಮೃತಿಗಳೂ ನಿರ್ಮಾಣವಾಗಿರಬಹುದು; ಅಂತೆಯೇ ನಿಬಂಧಗಳೂ ಕೂಡ.

ಹೀಗೆ ವೇದಗಳ ಕಾಲದ ನಂತರದಲ್ಲೆ ಧರ್ಮಸೂತ್ರಗಳು ನಿರ್ಮಾಣವಾಗಿರಬಹುದೆಂದು ನಂಬಲಾಗಿದೆ.

ಪ್ರಾಚೀನ ಕಾಲದಿಂದಲೂ ಧರ್ಮಶಾಸ್ತ್ರಗಳಲ್ಲಿ ವಿವಿಧ ವಿಷಯಗಳ ವರ್ಣನೆಗಳು ಇರುವುದನ್ನು ಕಾಣುತ್ತಿದ್ದೇವೆ. ಇಂತಹ ಧರ್ಮಶಾಸ್ತ್ರಗಳಲ್ಲಿ ಮುಖ್ಯವಾಗಿ ಧರ್ಮಸೂತ್ರಗಳು, ಸ್ಮೃತಿಗಳು ಹಾಗೂ ನಿಬಂಧಗ್ರಂಥಗಳು ಅಂತರ್ಗತವಾಗಿ, ಸಮಾವಿಷ್ಟವಾಗಿವೆ.

ಗೌತಮ, ಬೋಧಾಯನ, ಆಪಸ್ತಂಭ ಹಾಗೂ ವಸಿಷ್ಠ ಧರ್ಮಸೂತ್ರಗಳಲ್ಲಿ ಪ್ರಧಾನವಾಗಿ ವರ್ಣ, ಆಶ್ರಮ, ಧರ್ಮಗಳ ವಿಶೇಷಾಧಿಕಾರಗಳು ಹಾಗೂ ಕರ್ತವ್ಯಗಳು, ಷೋಡಶ ಸಂಸ್ಕಾರಗಳು, ಬ್ರಹ್ಮಚಾರಿಗಳು ಹಾಗೂ ಸ್ನಾತಕರ ಕರ್ತವ್ಯಗಳು, ಪಂಚ ಮಹಾಯಜ್ಞ, ಅಶೌಚ, ರಾಜಧರ್ಮ ಹಾಗೂ ವ್ಯವಹಾರಗಳ ವಿವೇಚನೆಯನ್ನು ಮಾಡಲಾಗಿದೆ.

ಇಷ್ಟೇ ಅಲ್ಲದೆ, ಇವುಗಳೊದಿಗೆ ಧರ್ಮಶಾಸ್ತ್ರ ಸಂಬಂಧದ ಕೆಲವು ಗ್ರಂಥಗಳಲ್ಲಿ ವ್ರತಗಳು, ಉತ್ಸರ್ಗ ಹಾಗೂ ಪ್ರತಿಷ್ಠೆಗಳು, ದೇವಾಲಯ, ಧರ್ಮಶಾಲೆ (ಛತ್ರ) ಹಾಗೂ ಕೊಳಗಳು ಇತ್ಯಾದಿಗಳ ನಿರ್ಮಾಣ, ತೀರ್ಥ ಹಾಗೂ ಕಾಲ ಇತ್ಯಾದಿಗಳ ಸವಿಸ್ತಾರ ವರ್ಣನೆಗಳು ದೊರೆಯುತ್ತವೆ.

ಮೇಲೆ ತಿಳಿಸಿದ ಧರ್ಮಶಾಸ್ತ್ರಗಳ ವಿಷಯಗಳ ಬಗ್ಗೆ ವಿಹಂಗಮ ದೃಷ್ಟಿಯನ್ನು ಬೀರುವುದರಿಂದ ಸ್ಪಷ್ಟವಾಗುವ ಅಂಶವೆಂದರೆ ಪ್ರಾಚೀನ ಕಾಲದಲ್ಲಿ ಧಾರ್ಮಿಕ ವಿಷಯಗಳ ಬಗ್ಗೆ ಜನರು ಹೆಚ್ಚು ವ್ಯಾಪಕವಾದ ಧಾರಣ ಶಕ್ತಿಯನ್ನು ಹೊಂದಿದ್ದುದೇ ಅಲ್ಲದೆ ಮಾನವ ಜೀವನವು ಸಂಪೂರ್ಣವಾಗಿ ಧಾರ್ಮಿಕ ಭಾವನೆಗಳೊಂದಿಗೆ ಒಂದಾಗಿತ್ತು ಎಂದು ಹೇಳಬಹುದು.

ಧರ್ಮಶಾಸ್ತ್ರಾನುಸಾರ 'ಧರ್ಮ'ವು ಯಾವುದೇ ಒಂದು ಸಂಪ್ರದಾಯದ ಹಾಗೂ ಮತದ ಕುರುಹಾಗಿ, ದ್ಯೋತಕವಾಗಿರಲಿಲ್ಲ. ಅದು ಜೀವನದ ಒಂದು ಆಚಾರ ಸಂಹಿತೆಯಾಗಿತ್ತು. ಇದು ಮಾನವನ ಕರ್ತವ್ಯಗಳನ್ನು ಸರಿಯಾದ ರೀತಿಯಲ್ಲಿ ವ್ಯವಸ್ಥಿತಗೊಳಿಸುತ್ತಿತ್ತು. ಸನ್ಮಾರ್ಗದಲ್ಲಿ ಮುನ್ನಡೆದು, ಉತ್ತಮ ಗುರಿಯನ್ನು ಜೀವನದಲ್ಲಿ ತಲುಪಲು ಯೋಗ್ಯತಾಸಿದ್ಧಿಯನ್ನು ನೀಡುತ್ತಿತ್ತು, ನೀಡುವುದು

ಧರ್ಮದ ಅರ್ಥ ಧಾರಣೆ ಮಾಡುವುದು ಎಂದು ಇದರಲ್ಲಿ ಸಂಪೂರ್ಣ ವಿಶ್ವವನ್ನು ಧಾರಣೆ ಮಾಡುವ ಕ್ಷಮತೆಯಲ್ಲಿ ಸಮರ್ಥತೆ ಇರುವುದು. ಇದನ್ನೇ ಧರ್ಮ ಎಂದು ಕರೆಯುವುದು

ಸ್ಮೃತಿಕಾರರ ಅನುಸಾರ ಧರ್ಮಕ್ಕೆ ಐದು ಸ್ವರೂಪಗಳಿರುತ್ತವೆ. ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಿಕಧರ್ಮ, ಹಾಗೂ ಗುಣಧರ್ಮ. ಮಾನವನಿಗಿರುವ ವಿಶೇಷಾಧಿಕಾರಿಗಳು, ಕರ್ತವ್ಯಗಳು, ಆಚಾರ - ವಿಚಾರಗಳು ಹಾಗೂ ವರ್ಣಾಶ್ರಮಗಳ ಧರ್ಮವನ್ನು ಇವು ಪ್ರತಿಪಾದಿಸುತ್ತವೆ

ಮುಖ್ಯವಾಗಿ ಧರ್ಮವು ಶ್ರೌತ ಹಾಗೂ ಸ್ಮಾರ್ತ ಎಂದು ಎರಡು ಭಾಗಗಳಾಗಿ ವಿಭಾಜಿತವಾಗಿದೆ. ವೈದಿಕ ಸಂಹಿತೆಗಳು ಹಾಗೂ ಬ್ರಾಹ್ಮಣಗಳೊಂದಿಗೆ ಪ್ರಮುಖ ಸಂಬಂಧವನ್ನು ಹೊಂದಿರುವ ಸಂಸ್ಕಾರಗಳನ್ನು ಹೊಂದಿರುವುದೇ ಶ್ರೌತ ಧರ್ಮ. ಮೂರು ಪವಿತ್ರ ಅಗ್ನಿಗಳ ಪೂಜೆ, ಪೌರ್ಣಮಿ ಹಾಗೂ ಪ್ರತಿಪದೆಗಳ ಯಜ್ಞ ಹಾಗೂ ಸೋಮ ಕೃತ್ಯ ಇತ್ಯಾದಿಗಳು ಈ ಧರ್ಮದಲ್ಲಿ ಪ್ರಮುಖವಾದವುಗಳಾಗಿವೆ

ಸ್ಮೃತಿಗಳಲ್ಲಿ ವಿಶೇಷತಃ ವರ್ಣಿತವಾಗಿದ್ದು, ವರ್ಣಾಶ್ರಮದೊಂದಿಗೆ ಸಂಬದ್ಧವಾಗಿರುವ ವಿಷಯಗಳು ಸ್ಮಾರ್ತಧರ್ಮದಲ್ಲಿ ಪ್ರಮುಖವಾದವುಗಳಾಗಿವೆ. ಇದಕ್ಕೆ ಮತ್ಸ್ಯಪುರಾಣದ ೧೪೫/೩೦-೩೧ ನೇ ಶ್ಲೋಕ ಭಾಗಗಳು ಆಧಾರವಾಗಿವೆ-

ದಾರಾಗ್ನಿ ಹೋತ್ರ ಸಂಬಂಧಮಿಜ್ಯಾ
ಶ್ರೌತಸ್ಯ ಲಕ್ಷಣಮ್
ಸ್ಮಾರ್ತೋ ವರ್ಣಾಶ್ರಮಾಚಾರೋ
ಯಮೈಶ್ಚ ನಿಯಮೈರ್ಯುತಃ

ಅಗ್ನ್ಯಾಧಾನಾದಿಪೂರ್ವಕೋಽಧೀತ
ಪ್ರತ್ಯಕ್ಷ ವೇದಮೂಲೋ
ದರ್ಶಪೌರ್ಣಮಾಸಾದಿಃ ಶ್ರೌತಃ,
ಅನುಮಿತ ಪರೋಕ್ಷ ಶಾಖಾಮೂಲಃ
ಶೌಚಾಚಮನಾದಿಃ ಸ್ಮಾರ್ತಃ
(ಪರಾ ಮಾ. ೧ ಭಾಗ-೧)

ಮಹಾಭಾರತದ ಅನುಶಾಸನ ಪರ್ವದ ೧೪೧ / ೬೫ ರಲ್ಲಿ ತಿಳಿಸಿರುವ-

ವೇದೋಕ್ತಃ ಪರಮೋ ಧರ್ಮಃ
ಸ್ಮೃತಿಶಾಸ್ತ್ರಗತೋಽಪರಃ
ಶಿಷ್ಟಾಚೀರ್ಣೋಽಪರಃ
ಪ್ರೋಕ್ತಸ್ತ್ರಯೋ ಧರ್ಮಃ ಸನಾತನಃ

ಎಂಬ ಶ್ಲೋಕದಂತೆ ಶ್ರೌತ, ಸ್ಮಾರ್ತ ಹಾಗೂ ಶಿಷ್ಟಾಚಾರದ ರೂಪದಲ್ಲಿಯೂ ಧರ್ಮವನ್ನು ವಿಭಾಜಿಸಬಹುದು. ಇನ್ನೂ ಕೆಲವು ಗ್ರಂಥಗಳಲ್ಲಿ ಈ ರೀತಿಯಲ್ಲಿ ವಿಭಾಜಿಸಲಾಗಿದೆ.

## ಧರ್ಮಸೂತ್ರಗಳು

ಪ್ರಾರಂಭದಲ್ಲಿ ಬಹಳಷ್ಟು ಧರ್ಮಸೂತ್ರಗಳ ಅಧ್ಯಯನವನ್ನು ಕಲ್ಪಸೂತ್ರಗಳ ಅಂಗಗಳ ರೂಪದಲ್ಲಿ ಚರಣ (ನುಡಿ)ಗಳ ಮುಖಾಂತರ ಮಾಡಲಾಗುತ್ತಿತ್ತು ಕೆಲವೊಂದು ವಿಷಯಗಳು ಇವೇ ಚರಣಗಳಿಂದ ತಿಳಿದು ಬರುತ್ತಿದ್ದುವು. ಇವು ಗೃಹ್ಯಸೂತ್ರಗಳ ರೂಪದಲ್ಲಿಯೂ ಇದ್ದುವು. ಎಲ್ಲ ಚರಣಗಳ ಗೃಹ್ಯಸೂತ್ರಗಳೂ ಇಂದು ಲಭ್ಯವಿಲ್ಲ

ಆಶ್ವಲಾಯನ ಶ್ರೌತ ಹಾಗೂ ಗೃಹ್ಯಸೂತ್ರ; ಮಾನವ ಶ್ರೌತ ಹಾಗೂ ಗೃಹ್ಯಸೂತ್ರ ಹಾಗೂ ಶಾಂಖಾಯನ ಶ್ರೌತ ಹಾಗೂ ಗೃಹ್ಯಸೂತ್ರಗಳಿಗೆ ಧರ್ಮಸೂತ್ರಗಳಿಲ್ಲ.

ಆದರೆ ಆಪಸ್ತಂಭ, ಹಿರಣ್ಯಕೇಶೀ ಹಾಗೂ ಬೌಧಾಯನರ ಚರಣಗಳಲ್ಲಿ ಮೂರೂ ಶ್ರೌತಗಳು, ಗೃಹ್ಯ ಹಾಗೂ ಧರ್ಮಸೂತ್ರಗಳಿವೆ ಈ ಧರ್ಮಸೂತ್ರಗಳ ಸಂಬಂಧವು ಆರ್ಯರ ಆಚಾರ, ನಿಯಮಗಳೊಂದಿಗೆ ಇತ್ತು ಇದರ ಪರಿಣಾಮವಾಗಿ ಕಾಲಾಂತರದಲ್ಲಿ ಎಲ್ಲ ಧರ್ಮಸೂತ್ರಗಳು ಎಲ್ಲ ಶಾಖೆಗಳವರಿಗೂ ಪ್ರಮಾಣರೂಪವಾಗಿರುವಂತೆ ಮಾನ್ಯಮಾಡಲ್ಪಟ್ಟವು. ಹೀಗಾಗಿ ಧರ್ಮಸೂತ್ರಗಳಲ್ಲಿನ ಮುಖ್ಯ ಪ್ರತಿಪಾದ್ಯ ವಿಷಯವು ಆಚಾರ, ವಿಧಿ - ನಿಯಮ ಹಾಗೂ ಕ್ರಿಯಾ ಸಂಸ್ಕಾರಗಳ ವರ್ಣನೆಗಳಾಗಿವೆ

**೧. ಗೌತಮ ಧರ್ಮಸೂತ್ರಗಳು :** ಉಪಲಬ್ಧವಿರುವ ಧರ್ಮಸೂತ್ರಗಳಲ್ಲಿ 'ಗೌತಮ - ಧರ್ಮಸೂತ್ರ'ವು ಪ್ರಾಚೀನತಮವಾದುದು ಈ ಸೂತ್ರಗಳಿಗೆ 'ಹರದತ್ತ'ನು ಟೀಕೆಯನ್ನು ಬರೆದಿದ್ದಾನೆ.

'ಗೌತಮ-ಧರ್ಮ ಸೂತ್ರ'ದಲ್ಲಿ ೨೮ ಅಧ್ಯಾಯಗಳಿವೆ. ಇವುಗಳಲ್ಲಿ ಮುಖ್ಯವಾಗಿ ಧರ್ಮದ ಉಪಾದಾನ, ಉಪನಯನ ಕಾಲ, ಅಧ್ಯಯನ - ನಿಯಮಗಳು, ಆಶ್ರಮ ಧರ್ಮಗಳು, ವರ್ಣಗಳ ವೃತ್ತಿಗಳು, ಚಾತುರ್ವರ್ಣ್ಯ ಕರ್ತವ್ಯಗಳು, ರಾಜನ ಕರ್ತವ್ಯಗಳು, ಸಂಸ್ಕಾರ, ರಾಜ ಹಾಗೂ ರಾಜಪುರೋಹಿತನ ಗುಣಗಳು, ದಂಡ, ಪ್ರಾಯಶ್ಚಿತ್ತ, ಅಶೌಚ, ಪಂಚವಿಧ ಶ್ರಾದ್ಧ, ಪಾತಕ, ವ್ರತ, ಸಂಪತ್ತಿನ ವಿಭಜನೆ ಹಾಗೂ ದ್ವಾದಶ ವಿಧ ಪುತ್ರರು - ಇತ್ಯಾದಿ ವಿಷಯಗಳು ವರ್ಣಿತವಾಗಿವೆ.

ಈ ಧರ್ಮಸೂತ್ರಗಳು ಗದ್ಯದಲ್ಲಿವೆ. ಇದರಲ್ಲಿ ವೈದಿಕ ಸಂಹಿತೆಗಳು, ಬ್ರಾಹ್ಮಣಗಳು, ಉಪನಿಷತ್ತುಗಳು, ವೇದಾಂಗಗಳು, ಇತಿಹಾಸ - ಪುರಾಣಗಳು ಹಾಗೂ ಉಪವೇದಗಳಿಂದ ಉದಾಹರಿಸಿದ 'ಸಂಕೇತ'ಗಳಿವೆ.

ಇವುಗಳಲ್ಲಿ ಸಾಮವಿಧಾನ ಬ್ರಾಹ್ಮಣಗಳಿಂದ ಉದಾಹರಿಸಿದ ಸಾಲುಗಳೂ ಇವೆ

ಹರದತ್ತನು 'ಮಿತಾಕ್ಷರ' ಎನ್ನುವ ಹೆಸರಿನಿಂದ 'ಗೌತಮ-ಧರ್ಮಸೂತ್ರ'ದ ಒಂದು ಟೀಕೆಯನ್ನೂ ಬರೆದಿದ್ದಾನೆ. ವಾಮನಪುತ್ರ ಮಸ್ಕರನೂ ಕೂಡ ಇದನ್ನು ಕುರಿತಾದ ಒಂದು ಭಾಷ್ಯವನ್ನು ರಚಿಸಿದ್ದಾನೆ

**೨. ಬೌಧಾಯನ ಧರ್ಮಸೂತ್ರಗಳು :** ಕೃಷ್ಣ ಯಜುರ್ವೇದದೊಂದಿಗೆ ಬೌಧಾಯನನು ಸಂಬಂಧವನ್ನು ಹೊಂದಿದ್ದು, ಅದಕ್ಕೆ ಆಚಾರ್ಯನಾಗಿದ್ದಾನೆ ಈ ಗ್ರಂಥವು ಪೂರ್ಣರೂಪದಲ್ಲಿ ದೊರೆತಿಲ್ಲ. ಗೋವಿಂದಸ್ವಾಮಿ ಎನ್ನುವಾತನು ಇದರ ಟೀಕೆಯನ್ನು ಬರೆದಿದ್ದಾನೆ ಇದು ವಿದ್ವತ್ ಪೂರ್ಣವಾಗಿದ್ದು, ತಥ್ಯದಿಂದ ಕೂಡಿದೆ

ಈ ಕೃತಿಯು ನಾಲ್ಕು ಪ್ರಶ್ನೆಗಳಲ್ಲಿ ವಿಭಾಜಿತವಾಗಿದೆ ಇವುಗಳಲ್ಲಿ ಮುಖ್ಯವಾಗಿ ಧರ್ಮದ ಉಪಾದಾನ, ಶಿಷ್ಟ-ಪರಿಷದ್, ಶಿಷ್ಟ ಹಾಗೂ ಮಿಶ್ರಿತ ಜಾತಿಗಳ ಸ್ಥಾನ, ಬ್ರಹ್ಮಚಾರಿಯ ಕರ್ತವ್ಯ, ಸ್ನಾತಕನ ಕರ್ತವ್ಯ ಅಶೌಚ, ಯಜ್ಞದ ಮಹತ್ವ, ಚಾತುರ್ವರ್ಣ ಹಾಗೂ ಉಪಜಾತಿಗಳು, ರಾಜನ ಕರ್ತವ್ಯ ಮಹಾಪಾತಕಗಳು, ಪಾತಕಗಳು, ದಂಡವಿಧಾನ, ಪ್ರಾಯಶ್ಚಿತ್ತ, ಉಯಿಲಿನ ಕಟ್ಟುನಿಟ್ಟು, ವರ್ಜಿತ - ಭೋಜನ ಹಾಗೂ ಪ್ರಾಯಶ್ಚಿತ್ತ, ಪಾಪ ವಿಮೋಚನೆಗಾಗಿನ ಉಪಾಯಗಳು, ಪಂಚ ಮಹಾಯಜ್ಞ, ತರ್ಪಣ, ಸಂನ್ಯಾಸ ನಿಯಮ, ಚಾಂದ್ರಾಯಣ ವ್ರತ, ಜಪಾದಿಗಳ ಮುಖಾಂತರ ಸಿದ್ಧಿ ಸಾಧನೆಗಳು, ಮಂತ್ರ - ಜಪ, ಪವಿತ್ರ ಮೂಲಮಂತ್ರ ಹಾಗೂ ಯಂತ್ರಗಳ ಪ್ರಶಂಸೆ - ಇತ್ಯಾದಿ ವಿಷಯಗಳು ವರ್ಣಿತವಾಗಿವೆ

ಪ್ರಸ್ತುತ ಬೌಧಾಯನ ಧರ್ಮಸೂತ್ರಗಳನ್ನು ಅನುಸರಿಸುವವರು ಹೆಚ್ಚಾಗಿ ದಕ್ಷಿಣ ಭಾರತದಲ್ಲಿ ಇದ್ದಾರೆ. ವೇದಗಳ ಪ್ರಸಿದ್ಧ ಭಾಷ್ಯಕಾರರಾದ ಸಾಯಣರು ಬೌಧಾಯನ ಗುಂಪಿಗೆ ಸೇರಿದವರಾಗಿದ್ದರು.

**೩. ಆಪಸ್ತಂಭ ಧರ್ಮಸೂತ್ರ :** ಕೃಷ್ಣ ಯಜುರ್ವೇದದ ತೈತ್ತರೀಯ ಶಾಖೆಯ ಆಪಸ್ತಂಭರು ತಮ್ಮ ಧರ್ಮಸೂತ್ರವನ್ನು ಎರಡು ಪ್ರಶ್ನೆಗಳಲ್ಲಿ ವಿಭಜಿಸಿದ್ದಾರೆ. ಈ ಧರ್ಮಸೂತ್ರದ ಎರಡು ಪ್ರಶ್ನೆಗಳನ್ನು ಬೇರೆ ಬೇರೆಯಾಗಿ ಹನ್ನೊಂದು - ಹನ್ನೊಂದು 'ಪಟಲ'ಗಳನ್ನಾಗಿ ವಿಭಜಿಸಲಾಗಿದೆ ಈ ಎರಡೂ ಪಟಲಗಳಲ್ಲಿ ಕ್ರಮವಾಗಿ ೩೨ ಮತ್ತು ೨೯ ಕಂಡಿಕಗಳಿವೆ ಇತರೇ ಧರ್ಮಸೂತ್ರಗಳಿಗಿಂತ ಈ ಧರ್ಮಸೂತ್ರಗಳು ಹೆಚ್ಚು ಸಂಕ್ಷಿಪ್ತವೂ, ಸಂಘಟಿತವೂ ಆಗಿವೆ ಇದು ಪೂರ್ತಿ ಗದ್ಯಮಯವಾಗಿದ್ದರೂ, ಅಲ್ಲಲ್ಲಿ ಕೆಲವೊಂದು ಪದ್ಯಗಳೂ ಕಾಣಬರುತ್ತವೆ. ಗೌತಮ ಹಾಗೂ ಬೌಧಾಯನ ಧರ್ಮಸೂತ್ರಗಳಲ್ಲಿ ವಿವರಿಸಿರುವ ವಿಷಯಗಳನ್ನೆ ಆಪಸ್ತಂಭರು ತಮ್ಮ ಧರ್ಮಸೂತ್ರಗಳಲ್ಲೂ ವಿವರಿಸಿದ್ದಾರೆ

ಉಯಿಲಿನ ಬಗ್ಗೆ ಇವರು ಕೆಲವೊಂದು ಸ್ಪಷ್ಟ ನಿರ್ದೇಶಗಳನ್ನು ನೀಡಿದ್ದಾರೆ. ಪುತ್ರನು ಇಲ್ಲದಿದ್ದಾಗ ನಂತರ ಸಪಿಂಡಕನಿಗೆ ಉಯಿಲನ್ನು ಬರೆಯಬೇಕೆಂದು ಹೇಳುತ್ತಾರೆ ಆ ನಂತರದಲ್ಲಿ ಆಚಾರ್ಯರು, ಅವರ ಶಿಷ್ಯರು, ತದನಂತರದಲ್ಲಿ ಮಗಳಿಗೆ ಬರೆಯದೇಕೆಂದು ಇದರಲ್ಲಿ ತಿಳಿಸಲಾಗಿದೆ ಒಂದು ವೇಳೆ ಇವರ್ಯಾರೂ ಇಲ್ಲದಿದ್ದಾಗ ಕಡೆಯದಾಗಿ ರಾಜನಿಗೆ ಆಸ್ತಿಯ ಹಕ್ಕನ್ನು ನೀಡದೇಕೆಂದು ತಿಳಿಸಲಾಗಿದೆ

ಪೂರ್ವ ಮೀಮಾಂಸೆಗೂ ಹಾಗೂ ಆಪಸ್ತಂಭ ಧರ್ಮ ಸೂತ್ರಕ್ಕೂ ಹತ್ತಿರದ ಸಂಬಂಧವಿದೆ. ಏಕೆಂದರೆ ಮೀಮಾಂಸದ ಬಹಳಷ್ಟು ಪಾರಿಭಾಷಿಕ ಶಬ್ದಗಳು ಹಾಗೂ ಸಿದ್ಧಾಂತಗಳು ಈ ಧರ್ಮಸೂತ್ರದಲ್ಲಿ ಒಂದಾಗಿವೆ

ಬಹಳ ಹಿಂದಿನ ಕಾಲದಿಂದಲೂ 'ಆಪಸ್ತಂಭ-ಧರ್ಮಸೂತ್ರ'ವು ಪ್ರಮಾಣವಾಗಿ ಜನರು ಸ್ವೀಕರಿಸಿದ್ದಾರೆ ಜೈಮಿನಿ ಸೂತ್ರಗಳ ಭಾಷ್ಯದಲ್ಲಿ ಶಬರನು ಆಪಸ್ತಂಭನನ್ನು ಉಲ್ಲೇಖಿಸಿದ್ದಾನೆ 'ತಂತ್ರವಾರ್ತಿಕ' ಎನ್ನುವ ಭಾಷ್ಯದಲ್ಲಿ ಇದರ ಕೆಲವೊಂದು ಸೂತ್ರಗಳನ್ನು ತುಲನಾತ್ಮಕ ಅಧ್ಯಯನಕ್ಕಾಗಿ ಉಪಯೋಗಿಸಿಕೊಳ್ಳಲಾಗಿದೆ ಶಂಕರಾಚಾರ್ಯರು ತಮ್ಮ ಬ್ರಹ್ಮ ಸೂತ್ರ (೪-೨-೧೪)ದ ಭಾಷ್ಯದಲ್ಲಿ ಆಪಸ್ತಂಭನನ್ನು ಉದಾಹರಿಸಿದ್ದಾರೆ ಅಂತೆಯೇ ಇದರ ಪ್ರಥಮ

ಪ್ರಶ್ನದ ಅಷ್ಟಮ ಪಟಲದಲ್ಲಿ ಇವರು 'ವಿವರಣ' ಎನ್ನುವ ಹೆಸರಿನ ಭಾಷ್ಯವನ್ನೂ ಕೂಡ ಬರೆದಿದ್ದಾರೆ ಮೇದಾ ತಿಥಿಯೂ ಕೂಡ ತನ್ನ ಗ್ರಂಥಗಳಲ್ಲಿ ಅಲ್ಲಲ್ಲಿ ಆಪಸ್ತಂಭನ ಬಗ್ಗೆ ಚರ್ಚಿಸಿದ್ದಾನೆ.

ಈ ಧರ್ಮಸೂತ್ರದ ವ್ಯಾಖ್ಯಾನಕಾರನಾದ ಹರದತ್ತನು 'ಉಜ್ವಲಾ' ಎನ್ನುವ ಹೆಸರಿನ ವಿದ್ವತ್ಪೂರ್ಣವಾದ ಟೀಕೆಯನ್ನು ಬರೆದಿದ್ದಾನೆ.

**೪. ಹಿರಣ್ಯಕೇಶಿ ಧರ್ಮಸೂತ್ರ :** ಈ ಧರ್ಮಸೂತ್ರವು 'ಹಿರಣ್ಯಕೇಶಿ' ಕಲ್ಪದ ೨೬ ನೇ ಹಾಗೂ ೨೭ ನೇ ಪ್ರಶ್ನೆಯ ವಿವರಣೆಯಾಗಿದೆ ಹಿರಣ್ಯಕೇಶಿಗಳ ಸಂಬಂಧವು ತೈತ್ತರೀಯ ಶಾಖೆಯ 'ಖಾಂಡಿಕೇಯ ಭಾಗ'ದ ಚರಣದೊಂದಿಗೆ ಸಂಬಂಧವನ್ನು ಹೊಂದಿದೆ. 'ಚರಣವ್ಯೂಹ'ದ ಭಾಷ್ಯದಲ್ಲಿ ಉದಾಹರಿಸಿರುವ 'ಮಹಾರ್ಣವ'ನ ಅನುಸಾರ ಹಿರಣ್ಯಕೇಶಿ ಎನ್ನುವ ಗುಂಪಿನ ಜನರು ಸಹ್ಯಾದ್ರಿ ಪರ್ವತದ ಸಾಲು ಹಾಗೂ ಪರಶುರಾಮ ಕ್ಷೇತ್ರ (ಕೊಂಕಣ) ಎಂದು ಕರೆಯಲ್ಪಡುವ ಕರ್ನಾಟಕದ ಕರಾವಳಿಯ ನೈಋತ್ಯಭಾಗದಲ್ಲಿ ನಿವಸಿಸುತ್ತಿದ್ದಾರೆ. ಪ್ರಸ್ತುತ ರತ್ನಗಿರಿ ಜಿಲ್ಲೆಯಲ್ಲಿನ ಬಹಳಷ್ಟು ಬ್ರಾಹ್ಮಣರು ತಮ್ಮನ್ನು ತಾವು ಹಿರಣ್ಯಕೇಶಿಗಳೆಂದು ಕರೆದುಕೊಳ್ಳುತ್ತಾರೆ

'ಹಿರಣ್ಯಕೇಶಿ ಧರ್ಮಸೂತ್ರ'ದ ಮೇಲೆ 'ಮಹಾದೇವ' ಹಾಗೂ 'ಹರದತ್ತ' ಎನ್ನುವವರಿಂದ ರಚಿತವಾದ ಟೀಕೆಗಳಿವೆ

**೫. ವಸಿಷ್ಠ- ಧರ್ಮಸೂತ್ರ :** ಈ ಧರ್ಮಸೂತ್ರದ ಅನೇಕ ಸಂಸ್ಕರಣಗಳು ಪ್ರಕಟಗೊಂಡಿವೆ 'ಕುಮಾರಿಲಭಟ್ಟ'ನ ಅನುಸಾರ ಇದನ್ನು ಮುಖ್ಯವಾಗಿ ಋಗ್ವೇದದ ಅನುಯಾಯಿಗಳು ಅಧ್ಯಯನ ಮಾಡುತ್ತಾರೆ ಆದರೆ ಇದರ ಶ್ರೌತ ಹಾಗೂ ಗೃಹ್ಯಸೂತ್ರಗಳು ದೊರೆಯುವುದಿಲ್ಲ ಇದರಲ್ಲಿ ವಿವರಿಸಿರುವ ವಿಷಯಗಳೂ ಕೂಡ ಈಗಾಗಲೇ ವಿವರಿಸಿರುವ ಧರ್ಮಸೂತ್ರಗಳ ತರಹವೇ ಇವೆ ಅಂದರೆ ಈ ಧರ್ಮಸೂತ್ರದಲ್ಲಿ ವ್ಯಾಕರಣ, ಮುಹೂರ್ತ, ಫಲಿತ-ಜ್ಯೋತಿಷ ಹಾಗೂ ನಕ್ಷತ್ರ ವಿದ್ಯೆಗಳ ವರ್ಣನೆ ಇದೆ ಈ ಧರ್ಮ ಸೂತ್ರದ ಟೀಕಾಕಾರನು 'ಯಜ್ಞಸ್ವಾಮಿ' ಎಂದು ಬೌಧಾಯನ ಧರ್ಮಸೂತ್ರದ ಟೀಕಾಕಾರನಾದ ಗೋವಿಂದಸ್ವಾಮಿಯಿಂದ ತಿಳಿದು ಬರುತ್ತದೆ.

**೬. ವಿಷ್ಣು-ಧರ್ಮಸೂತ್ರ:** ಈ ಧರ್ಮಸೂತ್ರದಲ್ಲಿ ೧೦೦ ಅಧ್ಯಾಯಗಳಿವೆ. ಮೊದಲ ಹಾಗೂ ಕಡೆಯ ಅಧ್ಯಾಯಗಳು ಪದ್ಯರೂಪದಲ್ಲಿವೆ. ಉಳಿದ ಅಧ್ಯಾಯಗಳು ಗದ್ಯ ಹಾಗೂ ಚಂಪೂನಲ್ಲಿವೆ ಇದರ ಸಂಬಂಧವು 'ಕಠ' ಎನ್ನುವ ಹೆಸರಿನ ಯಜುರ್ವೇದೀಯ ಶಾಖೆಯೊಂದಿಗಿದೆ.

ಇದರಲ್ಲಿ ಪ್ರತಿಪಾದಿತವಾಗಿರುವ ವಿಷಯವೂ ಕೂಡ ಈಗಾಗಲೇ ವರ್ಣಿಸಿರುವ ಧರ್ಮಸೂತ್ರಗಳಲ್ಲಿರುವ ವಿಷಯವೇ ಆಗಿದೆ ಇದರಲ್ಲಿ ಕೂರ್ಮಾವತಾರದ ಮುಖಾಂತರ ಶ್ರೀಹರಿಯು ಭೂಮಿಯ ಉದ್ಧಾರ ಮಾಡಿದ ಕಥೆಯು ಸಂಕ್ಷಿಪ್ತರೂಪವೂ ಇದೆ.

ಇದು ಹಾಗೂ ವಸಿಷ್ಠ ಧರ್ಮಸೂತ್ರಗಳೆರಡೂ ಒಂದು ಸಮನಾಗಿವೆ ಆದರೆ ಇದು ಮಹಾವಿಷ್ಣುವಿನಿಂದ ರಚಿತವಾಗಿದೆ ಎಂದು ಹೇಳಲಾಗುತ್ತಿದ್ದು, ತುಂಬಾ ವಿಲಕ್ಷಣವಾದ ಧರ್ಮಸೂತ್ರವಾಗಿದೆ

ಇದರ ಟೀಕಾಕಾರನು 'ನಂದ' ಎನ್ನುವ ಪಂಡಿತನು ಇದರ ಟೀಕೆಯ ಹೆಸರು 'ವೈಜಯಂತಿ' ಎಂಬುದು

**೭. ಹಾರೀತ - ಧರ್ಮಸೂತ್ರ :** ಕೆಲವೊಂದು ಧರ್ಮಸೂತ್ರಗಳಲ್ಲಿ ವಿವರಿಸಿರುವವುಗಳ ಆಧಾರದ ಮೇಲೆ, ಅವುಗಳಲ್ಲಿ ದೊರೆಯುವ ಕೆಲವೊಂದು ಸೂತ್ರಗಳ ಆಧಾರದ ಮೇಲೆ ಈ ಧರ್ಮಸೂತ್ರವಿದೆಯೆಂದು ಹೇಳಲಾಗುತ್ತದೆ ಸ್ವತಂತ್ರ ರೂಪದಲ್ಲಿ ಈ ಧರ್ಮಸೂತ್ರವು ದೊರೆಯುವುದಿಲ್ಲ ಬೌಧಾಯನನೂ, ಆಪಸ್ತಂಭ ಹಾಗೂ ವಸಿಷ್ಠರುಗಳೂ ಹಾರೀತನನ್ನು ಧರ್ಮಸೂತ್ರಕಾರ ರೂಪದಲ್ಲಿ ಬಹಳಷ್ಟು ಸಲ ತಮ್ಮ ಗ್ರಂಥಗಳಲ್ಲಿ ಉದಾಹರಿಸುತ್ತಾರೆ

ಈ ಧರ್ಮ ಸೂತ್ರದ ಭಾಷೆ ಹಾಗೂ ವಿಷಯಸೂಚಿಗಳ ಆಧಾರದ ಮೇಲೆ ಇದು ಪ್ರಾಚೀನವಾದ ಗ್ರಂಥವೆಂದು ತೀರ್ಮಾನಿಸಲಾಗಿದೆ ಇದರಲ್ಲಿ ಗದ್ಯದೊಂದಿಗೆ ಅನುಷ್ಟುಪ್ ಹಾಗೂ ತ್ರಿಷ್ಟುಪ್ ಛಂದಸ್ಸುಗಳೂ ದೊರೆಯುತ್ತವೆ ಹಾರೀತನು ಕಾಶ್ಮೀರ ದೇಶಕ್ಕೆ ಸೇರಿದವನು. ಹೇಮಾದ್ರಿಯ ಅನುಸಾರ 'ಹಾರೀತ'ನು ಓರ್ವ ಭಾಷ್ಯಕಾರನೂ ಹೌದು ಈ ಧರ್ಮಸೂತ್ರದಲ್ಲಿ ಪ್ರತಿಪಾದಿಸಿರುವ ವಿಷಯಗಳೂ ಕೂಡ ಇತರೇ ಧರ್ಮಸೂತ್ರಗಳಲ್ಲಿ ಇರುವಂತಹುದೇ ಆಗಿದೆ

**೮. ಶಂಖ ಲಿಖಿತ ಧರ್ಮಸೂತ್ರ :** ಈ ಧರ್ಮಸೂತ್ರದ ಅಧ್ಯಯನವು ಶುಕ್ಲ ಯಜುರ್ವೇದದ ಅನುಯಾಯಿಗಳಾದ 'ವಾಜಸನೇಯಿ'ಯರ ಮುಖಾಂತರ ಆಗುತ್ತಿತ್ತೆಂದು 'ತಂತ್ರವಾರ್ತಿಕ'ದಿಂದ ತಿಳಿದು ಬರುತ್ತದೆ

ಮಹಾಭಾರತದಲ್ಲಿ 'ಶಂಖ' ಹಾಗೂ 'ಲಿಖಿತ' ಕಥೆಯು ಬಂದಿದೆ ಯಾಜ್ಞವಲ್ಕ್ಯನು ಶಂಖ-ಲಿಖಿತರನ್ನು ಧರ್ಮಶಾಸ್ತ್ರಕಾರರಲ್ಲಿ ಮುಖ್ಯರನ್ನಾಗಿ ಪರಿಗಣಿಸುವನು ಈ ಧರ್ಮಸೂತ್ರದ ಯಾವುದೇ ಪ್ರತಿಯು ಲಬ್ಧವಾಗಿಲ್ಲ. ಇದೂ ಕೂಡ ಇತರೇ ನಿಬಂಧಗಳಲ್ಲಿ ಉದಾಹರಿಸಿರುವುದರಿಂದಷ್ಟೇ ಗೊತ್ತಾಗುವುದು ಈ ಧರ್ಮಸೂತ್ರದ ಬಗ್ಗೆ ಭಾಷ್ಯವೊಂದನ್ನು ಕೂಡ ಬರೆಯಲಾಗಿದೆ ಕನೌಜಿನ ರಾಜನಾದ ಗೋವಿಂದಚಂದ್ರನ ಮಂತ್ರಿಯಾದ ಲಕ್ಷ್ಮೀಧರನು ತನ್ನ 'ಕಲ್ಪತರು'ವಿನಲ್ಲಿ ಈ ಧರ್ಮಸೂತ್ರದ ಭಾಷ್ಯದ ಬಗ್ಗೆ ಚರ್ಚಿಸಿದ್ದಾನೆ

ಶೈಲಿ ಮತ್ತು ವಿಷಯಸೂಚೀಗಳಲ್ಲಿ ಇತರೇ ಧರ್ಮಸೂತ್ರಗಳ ಮಾದರಿಯನ್ನು ಇದು ಅನುಸರಿಸಿದೆ ಇದರಲ್ಲಿ ಗೌತಮ ಹಾಗೂ ಆಪಸ್ತಂಭ ಧರ್ಮಸೂತ್ರಗಳ ವಿಷಯಗಳನ್ನು ಸಮಾವಿಷ್ಟಗೊಳಿಸಲಾಗಿದೆ ಇದರ ಭಾಷೆಯು ವ್ಯಾಕರಣ ಬದ್ಧವಾಗಿದೆ ಇದರಲ್ಲಿ ಗದ್ಯಪದ್ಯಗಳೆರಡನ್ನೂ ಪ್ರಯೋಗಿಸಲಾಗಿದೆ

ಈ ರೀತಿಯಲ್ಲಿ ಧರ್ಮಸೂತ್ರಗಳು ಭಾರತೀಯರ ಜನ ಜೀವನವನ್ನು ರೂಪಿಸುವ ಮಾರ್ಗದರ್ಶಿಗಳಾಗಿದ್ದುವು. ನಿತ್ಯಜೀವನದ ಅನೇಕ ವಿಷಯಗಳು ಇವುಗಳಲ್ಲಿ ಬರುತ್ತವೆ ಅವು ಕ್ರಮಬದ್ಧವಾಗಿರಲು ಹೇಗೆ, ಯಾವರೀತಿಯಲ್ಲಿ ಅವನ್ನು ಅನುಸರಿಸಬೇಕು ಎಂಬುದನ್ನು ಇವು ತಿಳಿಸುತ್ತವೆ ಹೀಗಾಗಿ ಪುರಾತನ ಶಿಷ್ಟಾಚಾರಗಳು, ಧಾರ್ಮಿಕ ಸಂಸ್ಕಾರಗಳು, ಚತುರ್ವರ್ಣದ ವೃತ್ತಿಗಳು, ರಾಜನ (ಸರ್ಕಾರದ) ಹೊಣೆಗಳು ಮತ್ತು ಕರ್ತವ್ಯಗಳು, ತೆರಿಗೆಗಳ ನಿಯಮಗಳು, ಲೇನದೇನಗಳು, ಆನುವಂಶಿಕ ಹಕ್ಕುಗಳು, ಆಸ್ತಿಪಾಸ್ತಿಗಳ ವಿಭಾಗಗಳು, ಜನನ ಮರಣ ಮತ್ತು ಇತರೇ ಕಾರಣಗಳಿಂದ ಉಂಟಾಗುವ ಅಶೌಚಗಳು ಅವುಗಳನ್ನು ಅನುಸರಿಸುವ ರೀತಿ, ಆಹಾರದ ನಿಯಮಗಳು, ವ್ರತ ಪ್ರಾಯಶ್ಚಿತ್ತಗಳ ನಿಯಮಗಳು, ಅಪರಾಧಗಳಿಗೆ ನೀಡಬೇಕಾದ ಶಿಕ್ಷೆ - ಹೀಗೆ ಸಮಾಜದಲ್ಲಿ ಕಟ್ಟುನಿಟ್ಟಾಗಿ ಪಾಲಿಸಬೇಕಾದ ನಿಯಮಾವಳಿಗಳನ್ನು ಧರ್ಮಸೂತ್ರಗಳು ರೂಪಿಸುತ್ತಿದ್ದುವು. ಒಟ್ಟಿನಲ್ಲಿ ಭಾರತೀಯ ಸಮಾಜವನ್ನು ಕೈಹಿಡಿದು ನಡೆಸುವ ದೀಪಸದೃಶಗಳಾಗಿದ್ದುವು ಇವು. ಮಹಮ್ಮದೀಯರ ಹಾಗೂ ಐರೋಪ್ಯರ ಪ್ರವೇಶಗಳು ಭಾರತೀಯರ ಈ ರೀತಿಯ ಜೀವನಕ್ಕೆ ಸ್ವಲ್ಪ ತೊಡರುಗಾಲು ಹಾಕಿದರೂ, ಸಮನ್ವಯ ದೃಷ್ಟಿ ಇರುವ ಆಡಳಿತಗಾರರಿಂದ ಧರ್ಮಸೂತ್ರಗಳು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನಮ್ಮ ಜೀವನದ ರುವಾರಿಗಳಾಗಿಯೇನೋ ಇದ್ದವು. ಈ ದೃಷ್ಟಿಯಿಂದ ಆಧುನಿಕ ಜನಜೀವನದಲ್ಲಿ ಪ್ರಸ್ತುತ ಇರುವ ಜೀವನ ನಿಯಮಾವಳಿಗಳೊಂದಿಗೆ 'ಧರ್ಮಸೂತ್ರ'ಗಳನ್ನೂ ಸೇರಿಸಿ, ಜೀವನ ನಿರ್ವಹಣೆ ಮಾಡುವುದು ಅತ್ಯಂತ ಅಗತ್ಯವಾದ 'ಪ್ರಸ್ತುತಿ'ಯಾಗಿದೆ ಎಂದು ತಿಳಿಸಿದರೆ ತಪ್ಪಾಗಲಾರದು

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

# ಆಲಯದ ಆಡಳಿತ

ಆಂಗ್ಲ ಮೂಲ - ಡಾ|| ಎಸ್. ರಮೇಶನ್,

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

## ಚೋಳರ ಕಾಲದಲ್ಲಿ ಆಲಯ

ತೊಂಡಮಂಡಲವೂ ಸೇರಿದಂತೆ ಇಪ್ಪತ್ತನಾಲ್ಕು ಕೋಟ್ಟಂಗಳಿಂದ ಕೂಡಿದ್ದ ಪೆರುಂಬಾಣಪ್ಪಾಡಿಯು ಜಯಗೊಂಡ ಚೋಳ ಮಂಡಲದ ಒಂದು ಪ್ರಮುಖ ವಿಭಾಗವಾಗಿದ್ದರೆ ಹೊರತು, ದೇಶದಲ್ಲಿನ ಎಲ್ಲ ವಿಭಾಗ, ಉಪವಿಭಾಗಗಳೂ ಪಲ್ಲವರ ಕೋ ವಿಜಯದಂತಿ ವಿಕ್ರಮವರ್ಮನ ಕಾಲದಲ್ಲಿದ್ದಂತೆಯೇ ಚೋಳರ ಕಾಲದಲ್ಲಿಯೂ ಮುಂದುವರೆದವು. ತಿರುಚಾನೂರು ಹಾಗೂ ತಿರುಮಂಡಯಂ ಗ್ರಾಮ ಸಭೆಗಳ ಉಲ್ಲೇಖಗಳನ್ನು ನೋಡಬಹುದಾಗಿದ್ದು, ಇವುಗಳಲ್ಲಿ ತಿರುಚಾನೂರು ಗ್ರಾಮಸಭೆ ಹೆಚ್ಚಿನ ಪ್ರಾಧಾನ್ಯ ಹೊಂದಿತ್ತೆಂಬುದನ್ನು ಮೂರನೇ ರಾಜರಾಜನ ಕಾಲದ ಒಂದು ಶಾಸನದಿಂದ (ಜಿ.ಟಿ 126) ರಿಂದ ತಿಳಿಯಬಹುದಾಗಿದೆ. ತಿರುಚಾನೂರು ಪಡೆದಿದ್ದ ಧಾರ್ಮಿಕ ಹಾಗೂ ರಾಜಕೀಯ ಪ್ರಾಧಾನ್ಯದಿಂದಾಗಿಯೂ, ಇಲ್ಲಿಗೆ ರಾಜಪ್ರಮುಖರು ಪದೇ ಪದೇ ಭೇಟಿ ನೀಡುತ್ತಿದ್ದ ಕಾರಣದಿಂದಾಗಿಯೂ, ಸ್ಥಳೀಯ ಗ್ರಾಮಸಭೆಯು ತನ್ನ ಸಮಾವೇಶಗಳನ್ನು ನಡೆಸಲು ಅನುಕೂಲವಾಗುವಂತೆಯೂ, ಇಲ್ಲಿ ಸರ್ಕಾರಿ ವೆಚ್ಚದಲ್ಲಿ ಒಂದು ಓಲಗ ಶಾಲೆ - ದರ್ಬಾರ್ ಹಾಲ್ - ನಿರ್ಮಾಣವಾಗಿದ್ದಿರಬೇಕು.

ತಿರುಮಲೆಯ ಹಲವು ಬಿಡಿ ಶಾಸನಗಳು ತುಟಿತ್ಯವಾಗಿದ್ದು ಅವುಗಳಲ್ಲಿ ಕಂಡುಬರುವ ಕುಲೋತ್ತುಂಗ ಚೋಳನ ವಂಶ ವೃಕ್ಷ ವರ್ಣನೆಯಲ್ಲಿ 'ವಿಠ್ರಿರುಂದರುಳಿಯ ಕೋವಿ ರಾಜಕೇಸರಿ ಪೆನ್ಮಾರ್,' ರಾಜೇಂದ್ರಚೋಳ, ಕುಲೋತ್ತುಂಗ ಚೋಳ ಎಂದು ಮುಂತಾದ ಹೆಸರುಗಳು ಕಂಡುಬರುತ್ತವೆ. ಈತನ ಆಡಳಿತದ ಮೊದಲ ದಿನಗಳಲ್ಲಿ (ಮೊದಲ ಮೂರುವರ್ಷ) ಈತ ಎರಡನೇ ರಾಜೇದ್ರನೆಂಬ ಹೆಸರು ಹೊಂದಿದ್ದು, ಆಡಳಿತದ ನಾಲ್ಕನೆಯ ವರ್ಷದಲ್ಲಿ ಕುಲೋತ್ತುಂಗ ಚೋಳನೆಂಬ ಹೆಸರು ಹೊಂದಿದನೆಂದು ತಿಳಿಯಲಾಗಿದೆ. ಪುಗಳ್‌ಸುಳಂದ - ಪುನರಿ ಅಗಳ್ ಸುಳಂದ ಪೂವಿಯಿಲ್ ಎಂಬ ಪೂರ್ಣಪಾಠ ಜಿ.ಟಿ. 381 ರಲ್ಲಿ ಯೋಗಿಮಲ್ಲಾವರದಲ್ಲಿನ (265 - ಮದ್ರಾಸು ಶಾಸನ ಸಂಪುಟ - 1904) ಕೋರಾಜಕೇಸರಿ ವರ್ಮ ಅಲಿಯಾಸ್ ಚಕ್ರವರ್ತಿಗಳ್ ಶ್ರೀಕುಲೋತ್ತುಂಗ ಚೋಳದೇವನ ಆಳ್ವಿಕೆಯ ಇಪ್ಪತ್ನಾಲ್ಕನೆಯ ವರ್ಷದ ಶಾಸನದಲ್ಲಿ ದೊರೆಯುತ್ತದೆ. ಒಂದನೇ ರಾಜೇಂದ್ರ ಚೋಳ ಹಾಗೂ ಒಂದನೇ ಕುಲೋತ್ತುಂಗ ಚೋಳರ ಆಡಳಿತದ ನಡುವಿನ ಅವಧಿಯಲ್ಲಿ, ಈ ಮೊದಲಿಗೆ ಜಯಗೊಂಡ ಚೋಳಮಂಡಲವೆಂದು ಹೆಸರಾಗಿದ್ದ ತೊಂಡಮಂಡಲ ಪ್ರದೇಶವನ್ನು ರಾಜೇಂದ್ರ ಚೋಳನು (ತಿ ತಿ 20) ವಶಪಡಿಸಿಕೊಂಡ ಮೇಲೆ ರಾಜೇಂದ್ರ ಚೋಳ ಮಂಡಲವೆಂದು ಪುನರ್ನಾಮಕರಣ ಹೊಂದಿದಂತೆ ಕಂಡುಬರುತ್ತದೆ ಈ ಹೆಸರು ಜಿ.ಟಿ. 381 ರಲ್ಲಿಯೂ ವೀರ ರಾಜೇಂದ್ರದೇವನ ಆಡಳಿತದ 16 ನೇ ವರ್ಷದ ಜಿ.ಟಿ. 386 ನೇ ಶಾಸನದಲ್ಲಿಯೂ ಕಂಡುಬರುತ್ತದೆ ರಾಜೇಂದ್ರ ಚೋಳನ ಆಡಳಿತದಲ್ಲಿ ಈ ರೀತಿಯ ಹೊಸ ಹೆಸರು ಬಂದಿದ್ದು, ವೀರರಾಜೇಂದ್ರದೇವ ಹಾಗೂ ಒಂದನೇ ಕುಲೋತ್ತುಂಗರ ಕಾಲದಲ್ಲಿ ಮುಂದುವರೆದಿರಬೇಕು. ಆದರೆ ಮೂರನೇ ರಾಜೇಂದ್ರನ ಆಡಳಿತ ಕಾಲಕ್ಕೆ (ಜಿ.ಟಿ. 380 ಹಾಗೂ 389) ಜಯಗೊಂಡ ಚೋಳ ಮಂಡಲವೆಂಬ ಹೆಸರು ಪುನಃ ಪ್ರವೇಶವಾಯಿತು.



## ಚೋಳ ಶಾಸನಗಳ ವಿವರ :

ಬಲವಂತರೂ, ಪ್ರಜಾನುರಾಗಿಗಳೂ ಆಗಿದ್ದ ಈ ಚೋಳ ಸಾಮ್ರಾಟರಲ್ಲಿನ ಹಲವು ಪ್ರಮುಖರನ್ನು ಶಾಸನಗಳು ನಮಗೆ ಪರಿಚಯ ಮಾಡಿಕೊಡುತ್ತವೆ. ಅವರಲ್ಲಿ ಮೊದಲಿಗೆ ಕಂಡುಬರುವವನೆಂದರೆ ಕ್ರಿ.ಶ. 905 ರಿಂದ 953 ರ ವರೆಗೆ (ಜಿ.ಟಿ. 232 ಹಾಗೂ 234) ಆಳಿದ ಕೋ ಪರಕೇಸರಿವರ್ಮನ್ ಅಥವಾ ಒಂದನೇ ಪರಾಂತಕ. ಇಲ್ಲಿನ ಎರಡೂ ಮುರುಕು ಶಾಸನಗಳು ಈ ಸಾಮ್ರಾಟನ 20 ಹಾಗೂ 29 ನೆಯ ಆಡಳಿತ ವರ್ಷಗಳಲ್ಲಿ ನೀಡಲಾದ ನಂದಾದೀಪದ ದಾನದ ಬಗ್ಗೆ ತಿಳಿಸುತ್ತವೆ ಜಿ.ಟಿ. 232 ನೇ ಶಾಸನವು ಅಂದಿನ ರಾಜ್ಯದ ಪ್ರಾಂತೀಯ ವಿಭಾಗಗಳನ್ನು ಕುರಿತು ಹೇಳುತ್ತ ತಿರುಚೋಕನೂರು (ತಿರುಚಾನೂರು) ಗ್ರಾಮ ಸಭೆಯನ್ನು ಕುರಿತು ಹೇಳುತ್ತದೆ. (ಈ ಶಾಸನ ದೊರೆತಸ್ಥಳ) ಒಂದನೇ ರಾಜರಾಜನ ತಂದೆಯಾದ ಎರಡನೇ ಪರಾಂತಕ ಸುಂದರ ಚೋಳನ ನೇರ ಪ್ರಸ್ತಾಪ ಕಂಡು ಬರುವುದಿಲ್ಲವಾದರೂ, ತಿರುಮಲೆಯ ಆಲಯದ ಗರ್ಭಗುಡಿ

ಹೀಗೆ ಮೂಲ ದತ್ತಿಯ ನಿರಂತರತೆಯನ್ನು ಅಧಿಕಾರಿಯು ಕಾಪಾಡಿದ್ದನ್ನು ನೋಡಬಹುದು. ಇದರಿಂದಾಗಿ ಚೋಳರ ಕಾಲದಲ್ಲಿ ಪ್ರಚಲಿತವಿದ್ದ ಅತ್ಯುತ್ತಮ ಆಡಳಿತ ವಿಭಾಗ ಹಾಗೂ ನ್ಯಾಯಾಂಗಗಳ ಪರಿಚಯವಾಗುತ್ತದೆ. ಮಾತ್ರ ಕಾರ್ಯಾಂಗ ನ್ಯಾಯಾಂಗಗಳ ನಡುವೆ ಪ್ರತ್ಯೇಕತೆಯಿರಲಿಲ್ಲ. ರಾಜ್ಯಾಡಳಿತದ ಅಧಿಕಾರಗಳಲ್ಲಿ ಮೇಲಿನಿಂದ ಕೆಳಗಿಳಿಯುವ ಒಂದು ಅಧಿಕಾರಗಣವಿದ್ದಿತು. ನಮಗೆ ಕಂಡುಬರುವಂತೆ ಅಧಿಕಾರಿ ಅಥವಾ ಪ್ರಾಂತೀಯ ರಾಜ್ಯಪಾಲ ಇದ್ದು ಒಬ್ಬ ಉಪ ವಿಭಾಗಾಧಿಕಾರಿ - ಸಿರಿತನತ್ತುಪ್ಪನಿ ಮಗನ್ - ಕುಡವೂರ ನಾಡುವಿನ ಅಧಿಕಾರಿಯಾಗಿದ್ದ ಇವರಿಬ್ಬರ ಮಧ್ಯದ ಕೊಂಡಿಯಂತೆ ಪ್ರಾಯಶಃ ತಿರುವೆಂಕಟಕೋಟ್ಟಂನ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದ ಪೆರಿತನತ್ತುಪ್ಪನಿ ಮಗನ್ ಎಂಬ ಅಧಿಕಾರಿಯಿದ್ದು ಕುಡವೂರನಾಡಿನ ಅಧಿಕಾರಿಯ ಕೈಕೆಳಗೆ ಒಂದಿಬ್ಬರು ಕಿರಿಯ ಅಧಿಕಾರಿಗಳಿದ್ದು ಕುರ್ರಂ ಎಂಬ ಗ್ರಾಮ ಸಮೂಹಗಳನ್ನು ನೋಡಿಕೊಳ್ಳುವರಿದ್ದಂತೆ ಕಾಣುತ್ತದೆ. ಕೊತ್ತೂರ್ - ಒಡೆಯನ್ ಇಂತಹ ಒಬ್ಬ ಕಿರಿಯಧಿಕಾರಿಯಾಗಿದ್ದ. ದೆಟ್ಟದ ತಪ್ಪಲಿನಲ್ಲಿ ತಿರುಪತಿಗೆ ಹೊಂದಿಕೊಂಡಂತೆ ಒಂದು ಮೈಲಿ ದೂರದಲ್ಲಿ ತಿರುಚಾನೂರಿನ ಉತ್ತರದಲ್ಲಿ ಈ ಕೊತ್ತೂರು ಇದ್ದಿರಬೇಕು. ಇದು ಅಚ್ಯುತ ಪೆರುಮಾಳ್ ದೇವಾಲಯವನ್ನು ನಿರ್ಮಿಸಿದ ಅಚ್ಯುತರಾಯನ ಕಾಲದವರೆಗೆ ಅಸ್ತಿತ್ವದಲ್ಲಿದ್ದು ಇಂದು ಇಲ್ಲದ ಗ್ರಾಮವೆನ್ನಬಹುದು. (ಜಿ.ಟಿ. 355) ಈ ಪ್ರಾಚೀನ ಗ್ರಾಮದಲ್ಲಿಯೇ ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯವೂ ಇದ್ದಿತು. ಒಂದನೇ ರಾಜೇಂದ್ರ ಚೋಳನ ಕಾಲದಲ್ಲಿ ಕೊತ್ತೂರು ಗ್ರಾಮದ ಅಧಿಕಾರಿಯಾಗಿದ್ದ ರಾಯನ್ ರಾಜೇಂದ್ರ ಚೋಳನ್ ಅಲಿಯಾಸ್ ಬ್ರಹ್ಮರಾಯನ್ ಮುನಯದರೈಯನ್ ಈ ಕಪಿಲೇಶ್ವರಸ್ವಾಮಿ ಆಲಯದ ನಿರ್ಮಾಣ ಮಾಡಿರಬೇಕು (ಜಿ.ಟಿ 210).

'ಕೋಯಿಲ್‌ಕಾರ್ಯಂ ಆರಾಯಿಂದ ಇಡತ್ತು' ಎಂಬ ಉಲ್ಲೇಖದಿಂದ ಆಡಳಿತದ ಕಾರ್ಯದ ಅವಧಿಯಲ್ಲಿ ಆಲಯದ ಸಂಬಂಧ ಹೊಂದಿದ ವಿಷಯಗಳ ಪರಿಗಣನೆಗೆ ಸ್ವಲ್ಪ ಕಾಲವನ್ನು ಮೀಸಲಿಟ್ಟಂತೆ ಕಂಡುಬರುತ್ತದೆ. ಸಿರಿತನತ್ತುಪ್ಪನಿ ಮಗನ ಹೊರತು ಇತರ ಯಾವುದೇ ತೆರನಾದ ಅಧಿಕಾರಿಯನ್ನೂ ಹೇಳಿಕೆ ಪಡೆಯಲು ಕರೆಯದೆ ಇರುವುದನ್ನು ಗಮನಿಸಿದರೆ ಈತನಿಗೆ ಮಾತ್ರವೇ ತನ್ನ ಅಧಿಕಾರ ವರ್ತುಲದ ಆಡಳಿತದಲ್ಲಿ ಬರುವ ಆಲಯಗಳ ದಾನ, ದತ್ತಿಗಳ, ಪೂಜೆ, ನೈವೇದ್ಯಗಳ ಸಂಬಳ ಸಾರಿಗೆಗಳ ಲೆಕ್ಕ ದಾಖಲೆಗಳು ತಿಳಿದಿದ್ದಿತು ಎಂದೂ, ಅಧಿಕಾರಿಯಿಂದ ನಡೆದ ವಿಚಾರಣೆಯಿಂದಾಗಿ ನ್ಯಾಯ ವಿಚಾರಣೆಯ ಅಧಿಕಾರ ಕೆಳಗಿನವರಿಗೆ ಇರಲಿಲ್ಲವೆಂತಲೂ, ನ್ಯಾಯ ನಿರ್ಣಯ ನೀಡಲು ತಕ್ಕವನಾಗಿದ್ದ ಅಧಿಕಾರಿ ಎಂತಲೂ ತಿಳಿದುಬರುತ್ತದೆ.

'ಶ್ರೀಮತ್ ಕೀರ್ತಿ ಮುನ್ನುಡೈತ್ತ ಶ್ರೀ ಕೋ ರಾಜ ಕೇಸರಿಯಾನ ಶ್ರೀ ರಾಜರಾಜ ದೇವರ' ಆಳ್ವಿಕೆಯ 23 ನೇ ವರ್ಷದ 80 ನೇ ದಿನದಂದು ತಿರುಚಾನೂರಿನ ತಿಪ್ಪಲಾದೀಸ್ವರಂ ಉಡೆಯನಾಯನಾರ್ ದೇವರಿಗೆ ಅಭಿಷೇಕ ಮಾಡಿ ನಿವೇದನ ಸಲ್ಲಿಸಲೆಂದು ತಿರುಚ್ಚುಕನೂರು ಸಭೆಯರ ಧರ್ಮ ಕಟ್ಟಳೈಕೋಲ್ ಅಳತೆಯಲ್ಲಿ 26 25 ಕಳಂಜು ಶುದ್ಧ ಹೊನ್ನನ್ನು ಸ್ವೀಕರಿಸಿದ ಜಯಗೊಂಡ ಚೋಳ ಬ್ರಹ್ಮರಾಯನ ಬಗ್ಗೆ - ಚಾಳುಕ್ಯ ವೀರ ನರಸಿಂಗದೇವರ್ ಅಲಿಯಾಸ್ ಯಾದವರಾಯರಿಗೆ ದೂರು ಸಲ್ಲಿಸಲಾಯಿತು (ಜಿ ಟಿ. 384). ತಿರುಕ್ಕಣ್ಣಪ್ಪದೇವನ್ ತಿರುಕ್ಕವನದಲ್ಲಿ ನಡೆದ ವಿಚಾರಣೆಯಲ್ಲಿ ತಿಪ್ಪಲಾದೀಶ್ವರ ಆಲಯದ ಸ್ಥಾನತ್ತಾರರು ಮಹೇಶ್ವರರು ಹಾಗೂ ಸ್ಥಾನತ್ತಾರರು (ತಿರುಚಾನೂರಿನ ಅಳಗಿಯ ಪೆರುಮಾಳ್ ಕೋಯಿಲಿನವರು) ಸೇರಿದ ಸಭೆಯಲ್ಲಿ, ಹಿಂದೆ ನಡೆದ ಶಿಲಾ ಶಾಸನ ಗೊಳಿಸಿದ್ದ ಒಪ್ಪಂದದಂತೆ ಚಿನ್ನವನ್ನು ಸ್ವೀಕರಿಸಿದ ಪಂಚಾಯಿತರು ಉಭಯವನ್ನು ನಡೆಸಬೇಕಾಗಿದ್ದಿತೆಂದು ತಿಳಿಸಲು, ಸ್ಥಳದ ಪಂಚಾಯಿತಿಯವರು ತಮಗೆ ಈ ಬಗ್ಗೆ ತಿಳಿದಿಲ್ಲವೆಂದು ಹೇಳಿದರು ಆದರೆ ಅಧಿಕಾರಿಯು ಹಳೆಯ ಶಿಲಾಶಾಸನದ ಆಧಾರದಿಂದ ಆಲಯದ ಪರವಾಗಿ ತೀರ್ಪು ನೀಡುತ್ತ ಸಭೆಯರ್ (ಪಂಚಾಯತಿ) 26 25 ಕಳಂಜು ಹೊನ್ನನ್ನು ಆಲಯದ ಶ್ರೀ ಭಂಡಾರಕ್ಕೆ ಸಲ್ಲಿಸಬೇಕೆದು ತಿಳಿಸಲು, ಈ ಸಂದಾಯವನ್ನು ಆಲಯದ ಪಾರಂಪರಿಕ ಅರ್ಚಕರಾಗಿದ್ದ ಶಿವ ಬ್ರಾಹ್ಮಣರು ಒಪ್ಪಿಕೊಂಡರು ಈ ಹೊಸ ಸಂದಾಯಕ್ಕೆ 'ಊರವರು', 'ಪಡಿಕಾವಲರು', 'ಪೆರಿಕಯೂರವರ್' ಗಳು ಸಾಕ್ಷಿಗಳಾದರು ಹೀಗೆ ರಾಜ ಪ್ರಮುಖರು ದೂರು ಸಲ್ಲಿಸಿದವರ ಹಾಗೂ ಆರೋಪಿಗಳ ಎದುರಿನಲ್ಲಿ, ದೂರಿನಲ್ಲಿ ಆಸಕ್ತಿಯಿದ್ದವರ ಸಮಕ್ಷಮದಲ್ಲಿ ಸಂಬಂಧಪಟ್ಟ ದಾಖಲಾತಿಗಳ ಬಗ್ಗೆ ತಕ್ಕ ಪ್ರಾಧಾನ್ಯವನ್ನು ನೀಡಿ ನ್ಯಾಯ ವಿಚಾರಣೆ ನಡೆಸಿ, ತೀರ್ಪು ನೀಡಿದ್ದನ್ನು ಕಾಣಬಹುದು. ಹಿಂದೆ ಕಂಡುಬಂದಂತೆಯೇ ಇಲ್ಲಿಯೂ ಕಾರ್ಯಾಂಗ ನ್ಯಾಯಾಂಗಗಳು ಬೇರೆ ಬೇರೆಯಾಗದೆ ಎರಡೂ ಅಧಿಕಾರವೂ ಪ್ರಾಂತೀಯ ರಾಜ್ಯಪಾಲನಲ್ಲಿ ಕೇಂದ್ರೀಕೃತವಾಗಿದ್ದುದನ್ನು ನೋಡುತ್ತೇವೆ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ (ಜಿ ಟಿ. 126) ಶಾಸನ ಮೂರನೇ ರಾಜರಾಜನ ಆಡಳಿತದ 19 ನೇ ವರ್ಷದ್ದಾಗಿದ್ದು ಸ್ಥಳೀಯ ಆಡಳಿತ ಸಭೆಗಳ ಅಧಿಕಾರ ಹಾಗೂ ಆಲಯಕ್ಕಾಗಿ ಭೂಮಿಯ ಬೇಡಿಕೆಯನ್ನು ರಾಜನಿಗೆ ಸಲ್ಲಿಸುವಲ್ಲಿನ ಪ್ರಾತಿನಿಧಿತ್ವವನ್ನು ಬೆಳಕಿಗೆ ಒಡ್ಡುತ್ತದೆ. ತಿರುಕ್ಕುಡವೂರು ನಾಡಿನ ಪೆರಿಯ ನಾಟ್ಟಾರ್ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ತಿರುಮಂಗೈ ಆಳ್ವಾರ್ ಅವರ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಆದರೆ ಪೂಜೆಗಾಗಿ ಏರ್ಪಾಡು ಮಾಡಲಿಲ್ಲ ಶ್ರೀ ಶಠಗೋಪದಾಸರ್ ಪಿಳ್ಳೈ ಮತ್ತಿತರ ಮೂವರು ಒಟ್ಟಿಗೆ ಯೋಚಿಸಿ ತಿರುಚಾನೂರು ಪಂಚಾಯತಿಯ ಮುಂದೆ ವಿಷಯವನ್ನು ಚರ್ಚೆಗೆ ತಂದರು. ಪಂಚಾಯತಿಯವರು ಪೂರ್ಣ ಸದಸ್ಯ ಬಲದಿಂದ ಸಮಾವೇಶವಾಗಿ ಚರ್ಚೆ ನಡೆಸಿ ತೀರ್ಮಾನವನ್ನು ಕೈಗೊಂಡರು. ಪಂಚಾಯತಿಯ ಈ ನಿರ್ಣಯ - ಅದು ಶಿಫಾರಸು ಮಾತ್ರವೇ ಆಗಿದ್ದರೂ - ರಾಜನಿಂದ ಪೂರ್ಣರೂಪದಲ್ಲಿ ಅಂಗೀಕಾರ ಹೊಂದಿ ಆಚರಣೆಗೆ ತರಲ್ಪಟ್ಟಿತು.

ಈ ರಾಜಾಜ್ಞೆಯನ್ನು ತಿರುಕ್ಕುಡವೂರು ನಾಟ್ಟಾರರು ತಮ್ಮ ಗ್ರಾಮದಲ್ಲಿ ಚಳುಕ್ಕಿ (ಚಾಲುಕ್ಯ) ಮಾನದಂತೆ ಪಟ್ಟಿ ಯಗಲದ ಭೂಮಿಗೆ ಐದು ತುಂಬು ಧಾನ್ಯವನ್ನು ಬೆಳೆಯುವಂತಹ ಭೂಮಿಯನ್ನು ನೀಡಿ ಜಾರಿಗೆ ತಂದರು. ಹೀಗಾಗಿ ಈ ಹಿಂದೆ ಆಳ್ವಾರರ ವಿಗ್ರಹವನ್ನು ಪ್ರತಿಷ್ಠಾಪಿಸಿದ ಪೆರಿಯ ನಾಟ್ಟಾರರೇ ಪೂಜೆಯ ಪ್ರಾವಧಾನವನ್ನೂ ಮಾಡಿದಂತೆ ಆಯಿತು. ಪೆರಿಯ ನಾಟ್ಟಾರರು ತಿರುಕ್ಕುಡವೂರು ನಾಡಿನ ಜನಗಳ ಅನುಮೋದನೆಯೊಂದಿಗೆ ಅಂಗೀಕಾರವನ್ನು ತಿಳಿಸುತ್ತ ದಾಖಲೆಯನ್ನು ರುಜುಗೊಳಿಸಿದರು.

ಆಲಯದ ಪ್ರತಿನಿಧಿಗಳು ತಮ್ಮ ಬಿನ್ನಹವನ್ನು ಸ್ಥಳೀಯ ನೆಲದ ಒಡೆತನವನ್ನು ಹೊಂದಿದ ಗ್ರಾಮಸಭೆಗೆ ನೀಡುವ ಹಾಗಿದ್ದು, ಈ ಗ್ರಾಮಸಭೆಯು ತಮ್ಮ ಮೇಲಿನ ಅಧಿಕಾರಿಗೆ ಶಿಫಾರಸು ಮಾಡಿದ ನಂತರ ಆ ಮೂಲಕವಾಗಿ ರಾಜನ ಅಂಗೀಕಾರಕ್ಕೆ ತಲುಪುತ್ತಿತ್ತು ಸ್ಥಳೀಯ ಸಂಸ್ಥೆಗಳಿಗೆ ಯಾವುದೇ ಭೂಮಿಯನ್ನು ನೀಡುವ ಹಕ್ಕು ಇರಲಿಲ್ಲವಾದರೂ, ತಮ್ಮ ವಿಚಾರಕ್ಕೆಂದು ನೀಡಲಾದ ಯಾವುದೇ ವಿಷಯದಲ್ಲಿಯೂ ರಾಜನಿಗೆ ಶಿಫಾರಸುಮಾಡುವ ಅಧಿಕಾರವನ್ನು ಹೊಂದಿದ್ದವು. ಇವು ಸಾರ್ವಜನಿಕ ಸಂಸ್ಥೆಗಳಾಗಿದ್ದುದರಿಂದ ಅವುಗಳು ರಾಜ್ಯದ ಹಿತವನ್ನು ಕಾಪಾಡಬೇಕಾಗಿದ್ದು, ನಿರಂಕುಶವಾಗಿ ವರ್ತಿಸಲು ಆಗದಂತೆ ಮಾಡಿದ ಅಧಿಕಾರದ ಮಿತಿಗಳಾಗಿದ್ದವು.

(-ಮುಂದುವರೆಯುವುದು.)

(10 ನೇ ಪುಟದಿಂದ)

ಇಷ್ಟಪಡದೇ ಇರುವ ವರದರಾಜರನ್ನು, ಅರ್ಥದಿಂದಲೂ, ಗಾನದಿಂದಲೂ ಮನೋಹರವಾದ ಸ್ತೋತ್ರಗಳಿಂದಲೂ ಮರುಳುಮಾಡಿ "ನೀವು ಏನು ಹೇಳಿದರೂ ಕೊಟ್ಟುಬಿಡುತ್ತೇನೆ" ಎಂದು ಅವರಿಂದ ಮೊದಲು ವರವನ್ನು ಪಡೆದು ಅನಂತರ "ರಾಮಾನುಜಾಚಾರ್ಯರನ್ನು ನನಗೆ ಕೊಡಬೇಕು" ಎಂದು ಕೇಳಲು, ಮನಸ್ಸಿಲ್ಲದಿದ್ದರೂ ಆಡಿದ ಮಾತಿಗೆ ತಪ್ಪುವುದಕ್ಕೆ ಅವಕಾಶವಾಗದೆ ವರದರಾಜರು ರಾಮಾನುಜರನ್ನು ಅವರ ವಶಕ್ಕೆ ಕಳುಹಿಸಿಕೊಡಲು, ಅವರು ಶ್ರೀರಂಗಕ್ಕೆ ಕರೆದುಕೊಂಡು ಹೋಗಿ, ಶ್ರೀರಂಗನಾಥನನ್ನು ಸರ್ವವಿಧ ಕೈಂಕರ್ಯಗಳಿಂದಲೂ, ಅಲ್ಲಿರುವ ಸರ್ವಜನರನ್ನೂ ಉಭಯವೇದಾನ್ತ ಪ್ರವಚನದಿಂದಲೂ, ಸಂತುಷ್ಟರನ್ನಾಗಿ ಮಾಡಿ, ಅದರಿಂದ ತಮ್ಮ ಆಚಾರ್ಯರಾದ ಆಳವಂದಾರರ ಮನೋರಥವನ್ನು ಪೂರ್ತಿ ಮಾಡಿದರು.

ರಾಮಾನುಜಾಚಾರ್ಯರು ಅಂಶಪುರುಷರಾಗಿ ಅವತರಿಸಿ ತಾವೇ ಸರ್ವಜ್ಞರಾಗಿದ್ದರೂ ಕೂಡ "ಸಂಪ್ರದಾಯ ಪೂರ್ವಕವಾಗಿ ಬಂದ ಅರ್ಥಗಳನ್ನೇ ಇತರರಿಗೆ ಉಪದೇಶ ಮಾಡಬೇಕೇ ಹೊರತು ತನಗೆ ತೋರಿದ ಅರ್ಥಗಳನ್ನು ಹೇಳಬಾರದು" ಎಂಬುದನ್ನು ಎಲ್ಲರಿಗೂ ತಿಳಿಸುವುದಕ್ಕೋಸ್ಕರವೇ ಆಚಾರ್ಯಮುಖೇನ ಬಂದ ಅರ್ಥಗಳನ್ನು ವಿಶ್ವಾಸದಿಂದ ಗ್ರಹಿಸಿದರು ದ್ರೋಣಾಚಾರ್ಯರಲ್ಲಿ ಸಾಕ್ಷಾತ್ತಾಗಿ ಧನುರ್ವಿದ್ಯಾಭ್ಯಾಸ ಮಾಡದಿದ್ದರೂ ಮಣ್ಣಿನಿಂದ ದ್ರೋಣಾಚಾರ್ಯರನ್ನು ಮಾಡಿಟ್ಟುಕೊಂಡು ಅವರಲ್ಲಿ ಗುರುಭಕ್ತಿ ಮಾಡಿದ್ದರಿಂದ ಅರ್ಜುನನಿಗಿಂತಲೂ ಸಮರ್ಥನಾದ ಏಕಲವ್ಯನೆಂಬ ಬೇಡರವನಂತೆ ಯಾಮುನಾಚಾರ್ಯರಲ್ಲಿ ಸಾಕ್ಷಾತ್ತಾಗಿ ಓದದೇ ಇದ್ದರೂ ಅವರಲ್ಲಿ ಇವರಿಗೆ ಇರುವ ಭಕ್ತಿಯಿಂದಲೇ ಸಕಲಾರ್ಥಗಳನ್ನೂ ತಿಳಿದಿರುವ ರಾಮಾನುಜಾಚಾರ್ಯರ ಸಂಬಂಧದಿಂದ ಐವರೂ ಸ್ವರೂಪ ಸತ್ತೆಯನ್ನು ಪಡೆದರು ಮತ್ತು ಸ್ವಾಚಾರ್ಯರ ಅಪ್ಪಣೆಯನ್ನು ನಡೆಸಿದುದರಿಂದಲೂ ಕೃತಾರ್ಥರಾದರು.

ರಾಮಾನುಜಾಚಾರ್ಯರ ಶಿಷ್ಯರುಗಳು . ಕೂರತ್ತಾಳ್ವಾನ್, ವಡುಹನಂಬಿ, ಮುದಲಿಯಾಂಡಾನ್, ಅನಂದಾಳ್ವಾರ್, ಎಂಬಾರ್, ಅರುಳಾಳಪ್ಪೆರುಮಾಳೆಂಬೆರುಮಾನಾರ್, ತಿರುಕ್ಕುರುಹೈಪ್ಪಿಳ್ಳಾನ್ ಪಿಳ್ಳಾನ್ - ಇವರೇ ಮೊದಲಾದ ಎಪ್ಪತ್ತನಾಲ್ಕುಸಿಂಹಾಸನಾಧಿಪತಿಗಳಾದ ಆಚಾರ್ಯಪುರುಷರು ಈ ರಾಮಾನುಜಾಚಾರ್ಯರ ಶಿಷ್ಯರುಗಳು. ಇವರೆಲ್ಲರೂ ಮಹಾ ಜಿತೇಂದ್ರಿಯರಾಗಿಯೂ, ಮನೋಜಯವುಳ್ಳವರಾಗಿಯೂ, ಪರಮವೈರಾಗ್ಯಸಂಪನ್ನರಾಗಿಯೂ, ಸಕಲ ಪ್ರಮಾಣ ಪ್ರಮೇಯಗಳನ್ನರಿತವರಾಗಿಯೂ, ಇದ್ದರೂ ರಾಮಾನುಜಾಚಾರ್ಯರಲ್ಲಿ ಅತ್ಯಂತಾಂತರಂಗರಾಗಿಯೂ, ಆಚಾರ್ಯನೇ ಉಪಾಯೋಪೇಯಗಳೆಂಬ ಚರಮೋಪಾಯ ನಿಷ್ಠರಾಗಿಯೂ ಇದ್ದರು ಇವರುಗಳಲ್ಲದೆ ಇಂತಹ ಗುಣಗಳುಳ್ಳ ಏಳುನೂರು ಸನ್ಯಾಸಿಗಳೂ, ಹನ್ನೆರಡು ಸಾವಿರ ಏಕಾಂಗಿಗಳೂ, ಇನ್ನೂ ಅನೇಕ ಜನ ಶಿಷ್ಯರುಗಳೂ ಇದ್ದರು.

## ಆಚಾರ್ಯಗ್ರಂಥಗಳು

ವ್ಯಾಸಪ್ರಣೀತವಾದ ಬ್ರಹ್ಮಸೂತ್ರಕ್ಕೆ ವಿಸ್ತಾರವಾದ ವ್ಯಾಖ್ಯಾನರೂಪವಾದ "ಶ್ರೀ ಭಾಷ್ಯ", ಶ್ರೀ ಭಾಷ್ಯವು ಅತಿ ವಿಸ್ತಾರವಾದುದರಿಂದ ಆ ಅರ್ಥವೆಲ್ಲ ಸುಖವಾಗಿ ತಿಳಿಯುವುದಕ್ಕೋಸ್ಕರ ಪ್ರತಿಯೊಂದು ಅಧಿಕರಣಗಳಲ್ಲೂ ವಿಷಯ, ಸಂಶಯ, ಪೂರ್ವಪಕ್ಷ, ಯುಕ್ತಿ, ಸಿದ್ಧಾನ್ತ, ಸೂತ್ರಾರ್ಥಗಳನ್ನು ಮಾತ್ರ ಸಂಗ್ರಹವಾಗಿ ತಿಳಿಸುವ "ವೇದಾನ್ತದೀಪ" ಎಂಬ ಅದೇ ಬ್ರಹ್ಮಸೂತ್ರ ವ್ಯಾಖ್ಯಾನ, ಸೂತ್ರಾರ್ಥಗಳನ್ನು ಗರ್ಭೀಕರಿಸಿ ವಿಶೇಷವಾಗಿ ಉಪನಿಷದ್ವಾಕ್ಯಗಳಿಗೆ ವಾಖ್ಯಾನರೂಪವಾದ "ವೇದಾನ್ತಸಾರ" ಎಂಬ ಅದೇ ಸೂತ್ರವ್ಯಾಖ್ಯಾನ, ಸಕಲ ಶ್ರುತಿ, ಸ್ಮೃತಿ, ಸೂತ್ರ, ಪುರಾಣಾದಿ ಸಿದ್ಧವಾದ ವಿಶಿಷ್ಟಾದ್ವೈತ ಸಿದ್ಧಾನ್ತದ ರಹಸ್ಯಗಳೆಲ್ಲವನ್ನೂ ಪ್ರತಿಪಾದಿಸುವ ಒಂದೇ ಉಪನ್ಯಾಸರೂಪವಾದ "ವೇದಾರ್ಥ ಸಂಗ್ರಹ", ಸರ್ವಶಾಸ್ತ್ರಮಯವಾದ ಭಗವದ್ಗೀತೆಗೆ ಭಾಷ್ಯ, ಶರಣಾಗತಿ ಮಂತ್ರಕ್ಕೆ ವಿಸ್ತಾರವಾದ ವ್ಯಾಖ್ಯಾನರೂಪವಾದ ಶರಣಾಗತಿ ಗದ್ಯ", ಅದನ್ನೇ ಸಂಗ್ರಹವಾಗಿ ಹೇಳುವ "ಶ್ರೀರಂಗ ಗದ್ಯ" ಅದರಲ್ಲಿಯೇ ಉತ್ತರ ಖಂಡಾರ್ಥವನ್ನು ವಿಸ್ತಾರವಾಗಿ ಹೇಳುವ ನಿತ್ಯವೂ ಅನುಸಂಧಾನಕ್ಕಾಗಿ "ವೈಕುಂಠಗದ್ಯ" ನಿತ್ಯವೂ ಭಗವಂತನನ್ನು ಆರಾಧಿಸುವ ಕ್ರಮವನ್ನು ಬೋಧಿಸುವ "ನಿತ್ಯ" ಎಂಬ ಗ್ರಂಥ, ಹೀಗೆ ಒಂಭತ್ತು ಗ್ರಂಥಗಳನ್ನು ಮಹಾ ಜ್ಞಾನಿಗಳಾಗಿಯೂ, ಪರಮ ದಯಾಳುಗಳಾಗಿಯೂ ಇರುವ ರಾಮಾನುಜಾಚಾರ್ಯರು ಚೇತನೋಜ್ಜೀವನಾರ್ಥವಾಗಿ ಅನುಗ್ರಹಿಸಿದರು.

ಯಾತ್ರೆ ಮಾಡುವ ನೆವದಿಂದ ಆಯಾಯ ದೇಶದಲ್ಲಿರುವ ಜನಗಳನ್ನು ಜ್ಞಾನೋಪದೇಶದಿಂದಲೂ, ತಿಳಿದುಕೊಳ್ಳುವುದಕ್ಕೆ ಶಕ್ತಿ ಇಲ್ಲದವರನ್ನು ತಮ್ಮ ಕಟಾಕ್ಷಗಳಿಂದ ಪರಿಶುದ್ಧರನ್ನಾಗಿ ಮಾಡುತ್ತಲೂ, ಕಾಶ್ಮೀರ ದೇಶದಲ್ಲಿ ಪ್ರಸಿದ್ಧವಾದ ಸರಸ್ವತೀ ಪೀಠದ ಸಾಕ್ಷಾತ್ಸರಸ್ವತೀ ದೇವಿಯು "ಕಪ್ಯಾಸಂ", "ಸತ್ಯಂ ಜ್ಞಾನಂ" ಇತ್ಯಾದಿ ಶ್ರುತ್ಯರ್ಥಗಳನ್ನೂ, ವಿಶಿಷ್ಟಾದ್ವೈತದ ಅಂತರಂಗವಾದ ಗ್ರಂಥ ಗ್ರಂಥಿಗಳನ್ನೂ, ಪರೀಕ್ಷಿಸಿ "ಭಾಷ್ಯಕಾರರು" ಎಂಬ ಹೆಸರು ನಿಮಗೇ ಸಲ್ಲತಕ್ಕದ್ದು ಎಂದು ಬಹಳ ತೃಪ್ತಿಯಿಂದ ಹೇಳಲು ಅಂದಿನಿಂದ "ಭಾಷ್ಯಕಾರರು" ಎಂದೇ ಇವರಿಗೆ ಹೆಸರಾಯಿತು. ರಾಮಾನುಜಾಚಾರ್ಯರು ಹೀಗೆ ಆಸೇತು ಹಿಮಾಚಲ ಭೂಪ್ರದಕ್ಷಿಣ ಮಾಡಿಕೊಂಡು ಪುನಃ ಶ್ರೀರಂಗಕ್ಕೆ ದಯಮಾಡಿಸಿದರು

## ಕರ್ನಾಟಕಕ್ಕೆ ಆಗಮನ

ಚೋಳರಾಜನು "ಶಿವಾತ್ಪರತರಂ ನಾಸ್ತಿ" ಎಂದು ಶಿವನಿಗಿಂತಲೂ ಪರಾತ್ಪರ ವಸ್ತು ಯಾವುದೂ ಇಲ್ಲ ಎಂಬರ್ಥವುಳ್ಳ ವಾಕ್ಯವನ್ನು ಬರೆದು ಇದಕ್ಕೆ ಸಂಮತಿಯನ್ನು ಕೊಡುವ ರಾಮಾನುಜಾಚಾರ್ಯರ ರುಜುವನ್ನು ತೆಗೆದುಕೊಂಡು ಬರಬೇಕೆಂದು ಆಳುಗಳಿಗೆ ಅಪ್ಪಣೆ ಮಾಡಿ ಇವರಲ್ಲಿಗೆ ಕಳುಹಿಸಿದ್ದನು. ಆಗ ಇವರಿಗೆ ಏನು ಅಪಾಯ ಸಂಭವಿಸುವುದೋ ಎಂದು ಇವರ ಶಿಷ್ಯರಾದ ಕೂರತ್ತಾಳ್ವಾರರು ಇವರ ತ್ರಿದಂಡಕಾಷಾಯಗಳನ್ನು ತಾವು ಧರಿಸಿಕೊಂಡು ಆಚಾರ್ಯರಾದ ಪೆರಿಯ ನಂಬಿಯವರೊಡನೆ ಚೋಳನ ಸಭೆಗೆ ಹೊರಟು ಹೋದರು. ಅದೇ ಸಮಯದಲ್ಲಿ ರಾಮಾನುಜಾಚಾರ್ಯರೂ ಬಿಳಿಯ ವಸ್ತ್ರಗಳನ್ನು ಧರಿಸಿ ಅವರ ಕೆಲವು ಶಿಷ್ಯರೊಡನೆ ಶ್ರೀರಂಗವನ್ನು ಬಿಟ್ಟು ಪಶ್ಚಿಮಕ್ಕೆ ಪ್ರಯಾಣ ಹೊರಟರು.

ಸುಮಾರು ನಲವತ್ತೈದು ಜನ ಶಿಷ್ಯರೊಂದಿಗೆ ಹೊರಟು ಬಹಳ ದೂರ ಹೋಗಿ ಹಸಿವು ಬಾಯಾರಿಕೆ, ಬಳಲಿಕೆ, ಮಳೆ, ಗಾಳಿ ಇವುಗಳಿಂದ ಕಂಗೆಟ್ಟು ರಾತ್ರಿ ಕತ್ತಲೆಯಿಂದ ಮಾರ್ಗವೂ ತಿಳಿಯದೆ ಒಂದು ಕಡೆ ದೂರದಲ್ಲಿ ಬೆಂಕಿಯನ್ನು ಕಂಡು ಇಲ್ಲಿ ಜನಗಳಿರಬಹುದೆಂದೂಹಿಸಿ, ಆ ಕಡೆಗೆ ಹೋದರು. ಆಗ ಅಲ್ಲಿದ್ದ ಕೆಲವರು ಬೇಡರು, "ಬ್ರಾಹ್ಮಣರ ಧ್ವನಿಯಂತೆ ಕೇಳಿಸುವುದು, ಅವೇಳೆಯಾಗಿದೆ" ಎಂದು ಹೇಳಿ ಇವರ ಹತ್ತಿರಕ್ಕೆ ಬಂದು ಬೇಲಿಯನ್ನು ಕಿತ್ತು ಮಾರ್ಗಮಾಡಿ ತಮ್ಮ ಗುಡಿಸಲಿನ ಒಳಕ್ಕೆ ಕರೆದುಕೊಂಡು ಹೋದರು

ಅಲ್ಲಿ ಮಳೆಯಿಂದ ಒದ್ದೆಯಾಗಿದ್ದ ಬಟ್ಟೆಗಳನ್ನು ಬೆಂಕಿಯಲ್ಲಿ ಕಾಯಿಸಿ ಆರಿಸಿಕೊಂಡು, ಛಳಿಯಿಂದ ಸೆಡೆತುಕೊಂಡಿದ್ದ ತಮ್ಮ ಶರೀರಗಳನ್ನೂ ಬೆಂಕಿಯಲ್ಲಿ ಕಾಯಿಸಿ ಸ್ವಲ್ಪ ಸ್ವಾಧೀನಮಾಡಿಕೊಂಡು, ಅವರು ತಂದುಕೊಟ್ಟ ಜೋಳದ ತೆನೆಗಳನ್ನು ಆ ಬೆಂಕಿಯಲ್ಲಿ ಸುಟ್ಟು ಜೇನುತುಪ್ಪದಲ್ಲಿ ಕಲಸಿ ತಿಂದು - ತಮ್ಮ ಕಷ್ಟಗಳನ್ನೆಲ್ಲಾ ಮಾತನಾಡುತ್ತಾ ಹಾಗೆಯೇ ನಿದ್ರೆ ಹೋದರು

ಅಲ್ಲಿ ಅಡಿಗೆಗೆ ಮತ್ತು ಊಟಕ್ಕೆ ಅವಕಾಶವಿಲ್ಲದುದರಿಂದ ಅಲ್ಲಿಗೆ ಸ್ವಲ್ಪ ದೂರದಲ್ಲಿರುವ ಒಂದು ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನ ಮನೆಗೆ ಅವರನ್ನು ಆ ಬೇಡರು ಕರೆದುಕೊಂಡು ಹೋಗಿ ಬಿಡಲು ಆ ಬ್ರಾಹ್ಮಣನ ಹೆಂಡತಿಯು ಬಹಳ ಭಯಭಕ್ತಿಗ

ಳಿಂದ ಬಂದು ನಮಸ್ಕರಿಸಿ "ನಾನು ಅಡಿಗೆಮಾಡುತ್ತೇನೆ. ನೀವೆಲ್ಲರೂ ಊಟಮಾಡಬೇಕು" ಎಂದು ಪ್ರಾರ್ಥಿಸಲು, "ಇವಳ ಕೈಯಿಂದ ತಾವು ಹೇಗೆ ಊಟಮಾಡುವುದು" ಎಂದು ಇವರು ಅನುಮಾನಪಡಲು, ಆಗ ಅವಳು ಆ ಊರಲ್ಲಿ ಹಿಂದೆ ಯಾವಾಗಲೋ ಮಳೆ ಹೋಗಿಬಿಟ್ಟಿದ್ದಾಗ ತಾನು ಶ್ರೀರಂಗದಲ್ಲಿ ಸ್ವಲ್ಪ ದಿವಸ ವಾಸವಾಗಿದ್ದುದನ್ನೂ, ತಾನು ವಾಸವಾಗಿದ್ದ ಮನೆಗೆ ರಾಮಾನುಜಾಚಾರ್ಯರು ಭಿಕ್ಷೆಗೆ ಬರಲು ತಾನು ಅವರಿಗೆ ನಮಸ್ಕಾರ ಮಾಡಿ, ಅವರಿಂದ ಜ್ಞಾನೋಪದೇಶ ಪಡೆದು ಅದು ಮರೆತುಹೋಗಲು, ಹಾಗೆಯೇ ಮತ್ತೊಂದು ದಿವಸದಲ್ಲೂ ಅದನ್ನೇ ಪುನಃ ಉಪದೇಶಮಾಡಿಸಿಕೊಂಡುದುದನ್ನೂ, ಪುನಃ ತಮ್ಮೂರಿಗೆ ಮಳೆಯಾದ ಮೇಲೆ ಹಿಂತಿರುಗುವಾಗ ರಾಮಾನುಜಾಚಾರ್ಯರಿಗೆ ನಮಸ್ಕಾರ ಮಾಡಿ "ನಾನು ನಮ್ಮೂರಿಗೆ ಹೋಗಿ ಬರುವೆನು ತಮ್ಮ ಜ್ಞಾಪಕಾರ್ಥವಾಗಿ ಏನಾದರೂ ದಯಪಾಲಿಸಬೇಕು" ಎಂದು ಪ್ರಾರ್ಥಿಸಲು ಅವರು ತಮ್ಮ ಪಾದುಕೆಗಳನ್ನು ತನಗೆ ಬಿಜಮಾಡಿಸಿ ಕೊಟ್ಟದ್ದನ್ನೂ ಹೇಳಿ "ನಾನು ರಾಮಾನುಜಾಚಾರ್ಯರ ಶಿಷ್ಯಳು. ಅನುಮಾನಪಡಬೇಡಿರಿ" ಎಂದು ಹೇಳಿದಳು.

ಆಗ ಬಿಳಿಯ ವಸ್ತ್ರವನ್ನುಟ್ಟುಕೊಂಡು ತ್ರಿದಂಡವಿಲ್ಲದೆಯೇ ಇರುವ ರಾಮಾನುಜಾಚಾರ್ಯರು ಇವಳನ್ನು ಅಡಿಗೆ ಮಾಡಹೇಳಿ, ಒಬ್ಬ ಶಿಷ್ಯನನ್ನು ಕರೆದು "ಇವಳು ಏನು ಮಾಡುವಳೆಂದು ರಹಸ್ಯವಾಗಿ ನೀವು ನೋಡಿ ನನಗೆ ತಿಳಿಸಬೇಕು" ಎನ್ನಲು, ಅವರು ಹಾಗೆಯೇ ನೋಡಿಕೊಂಡಿದ್ದು ಆಮೇಲೆ ಎಲ್ಲರ ಎದುರಿಗೂ ರಾಮಾನುಜಾಚಾರ್ಯರು ಕೇಳಲು, "ಮಡಿ ಉಟ್ಟುಕೊಂಡು ರಾಮಾನುಜಾಚಾರ್ಯರ ಪಾದವೇ ಗತಿ" ಎಂಬುದಾಗಿ ಹೇಳಿಕೊಂಡು ಅಡಿಗೆ ಮಾಡಿ ದೇವರಿಗೆ ನಿವೇದನ ಮಾಡಿದಳು. ಆದರೆ, ಅದು ದೇವರಾಗಿರಲಿಲ್ಲ. ಕಪ್ಪಾಗಿ ದೊಡ್ಡ ಆಕಾರವಾಗಿತ್ತು ಎಂದು ಹೇಳಿದರು. ಅನಂತರ ಅವಳನ್ನು ಕರೆದು ಯಾವ ದೇವರಿಗೆ ನಿವೇದನಮಾಡಿದೆ ಎಂದು ಕೇಳಲು, ಅವಳು ರಾಮಾನುಜಾಚಾರ್ಯರ ಪಾದುಕೆಗಳಿಗೆ ನಿವೇದನ ಮಾಡಿದೆ ಎಂದು ಹೇಳಿದಳು. ಆ ಪಾದುಕೆಗಳನ್ನು ತರಹೇಳಿ ಇಲ್ಲಿ ರಾಮಾನುಜಾಚಾರ್ಯರು ಇದಾರೆಯೇ? ನೋಡಿ ಹೇಳೆನಲು, ಆಕೆಯು ದೀಪ ಹಚ್ಚಿಕೊಂಡು ಬಂದು ಎಲ್ಲರನ್ನೂ ನೋಡುತ್ತಾ ಒಂದು ರಾಮಾನುಜಾಚಾರ್ಯರನ್ನು ನೋಡಿ ಇವರೇ ರಾಮಾನುಜಾಚಾರ್ಯರು. ತ್ರಿದಂಡಕಾಷಾಯಗಳು ಇಲ್ಲದುದರಿಂದ ಶೀಘ್ರವಾಗಿ ತಿಳಿಯುವುದಿಲ್ಲವೆಂದು ಹೇಳಿ ಆ ಪಾದುಕೆಗಳನ್ನು ರಾಮಾನುಜಾಚಾರ್ಯರ ಪಾದಾರವಿಂದಗಳಿಗೆ ಸಮರ್ಪಿಸಲು ಅದು ಸರಿಯಾಗಿತ್ತು. ಇದೆಲ್ಲವನ್ನೂ ನೋಡಿ ಎಲ್ಲರಿಗೂ ನಂಬಿಕೆ ಹುಟ್ಟಿದ ಮೇಲೆ "ಇನ್ನು ಎಲ್ಲರೂ ಊಟಮಾಡಿ" ಎಂದು ರಾಮಾನುಜಾಚಾರ್ಯರು ಅಪ್ಪಣೆ ಮಾಡಿ, ತಾವೂ ಹಾಲು ಹಣ್ಣುಗಳನ್ನು ತರಿಸಿಕೊಂಡು ತಮ್ಮ ದೇವರಿಗೆ ನಿವೇದನ ಮಾಡಿ ಸ್ವೀಕರಿಸಿದರು.

## ಸಾಲಗ್ರಾಮ

ಅನಂತರ ಶ್ರೀರಾಮಾನುಜಾಚಾರ್ಯರು ತಮ್ಮ ಶಿಷ್ಯವರ್ಗಗಳೊಡನೆ "ಮಿರಿಳಾಪುರೀ" ಎಂಬ ಊರಿಗೆ ಬಂದು ಸೇರಲು, ಅಲ್ಲಿನ್ದ ಜನರು ಮೂರ್ಖರಾಗಿದ್ದುದರಿಂದ ಯಾರೂ ಇವರನ್ನು ಆದರಿಸಲಿಲ್ಲ. ಆಗ ತಮ್ಮನ್ನು ಅವರು ಆಶ್ರಯಿಸ ಕೃತಾರ್ಥರಾಗುವುದಕ್ಕೋಸ್ಕರ "ದಾಶರಥಿ" (ಮುದಲಿಯಾಂಡಾರ್) ಎಂಬ ತಮ್ಮ ಶಿಷ್ಯರನ್ನು ಕುರಿತು, "ನೀವು ಈ ಊರಿನವರೆಲ್ಲರೂ ಕುಡಿಯುವುದಕ್ಕಾಗಿ ತೆಗೆದುಕೊಂಡು ಹೋಗುವ ಕಾಲುವೆಯ ನೀರಿನಲ್ಲಿ ನಿಮ್ಮ ಪಾದಗಳನ್ನು ಸ್ವಲ್ಪ ಹೊತ್ತು ಇಟ್ಟುಕೊಂಡಿರಿ. ನಿಮ್ಮ ಶ್ರೀಪಾದ ತೀರ್ಥವನ್ನು ಪಾನ ಮಾಡಿದುದರಿಂದ ಅವರಿಗೆ ಜ್ಞಾನೋದಯವಾಗಲಿ" ಎಂದಪ್ಪಣೆ ಮಾಡಿದರು. ಅವರು ಅದೇ ರೀತಿ ಮಾಡಲು, ಅವರೆಲ್ಲರೂ ಇವರ ಬಳಿಗೆ ಬಂದು ಆಶ್ರಯಿಸಿ ಕೃತಾರ್ಥರಾದರು. ಅಲ್ಲಿದ್ದ "ಆಂಧ್ರಪೂರ್ಣ" (ವಡುಹನಂಬಿ) ಎಂಬವರು ರಾಮಾನುಜಾಚಾರ್ಯರ ಪಾದಗಳನ್ನಾಶ್ರಯಿಸಿ ಅತ್ಯಂತರಂಗಪ್ರಿಯ ಶಿಷ್ಯರಾದರು.

ಆ ಮಿರಿಳಾಪುರಿಗೆ "ಸಾಲಗ್ರಾಮ" ಎಂದು ಹೆಸರಿಟ್ಟು ಅಲ್ಲಿ ತಮ್ಮ ಶ್ರೀಪಾದತೀರ್ಥದ ಕೊಳವನ್ನು ಸ್ಥಾಪಿಸಿದರು. ಅಲ್ಲಿರುವ ನರಸಿಂಹಸ್ವಾಮಿ ದೇವಸ್ಥಾನದಲ್ಲಿ ದಯಮಾಡಿಸಿದ್ದು ತಮಗೆ ಶ್ರೀರಂಗವಾಸ, ರಂಗನಾಥರ ಸೇವೆ, ಉಭಯ ವೇದಾನ್ತಕಾಲಕ್ಷೇಪಾದಿಗಳಿಗೆ ವಿರೋಧಮಾಡಿದ ಆ ಚೋಳರಾಜನು ಈ ಲೋಕವನ್ನೇ ಬಿಟ್ಟು ಹೋಗುವಂತೆ ಮಂತ್ರಜಪವನ್ನು ಮಾಡಿ ನರಸಿಂಹಸ್ವಾಮಿಯನ್ನು ಪ್ರಾರ್ಥಿಸಿದರು. ಅನಂತರ ಅಲ್ಲಿಂದ ಹೊರಟು ಯಾದವಗಿರಿಯ ಸಮೀಪದಲ್ಲಿರುವ "ಭಕ್ತಪುರೀ" (ತೊಂಡನೂರು) ಎಂಬ ಊರಿಗೆ ದಯಮಾಡಿಸಿ ಅಲ್ಲಿ ತಮಗೆ ಶಿಷ್ಯರಾದ "ತೊಂಡನೂರು ನಂಬಿ" ಎಂಬವರ ಪ್ರಾರ್ಥನೆಯ ಪ್ರಕಾರ ಅಲ್ಲಿನ ದೊರೆಯಾದ "ಬೆಟ್ಟಿಲದೇವ" ಎಂಬ ಜೈನರಾಜನನ್ನು ಅನುಗ್ರಹಿಸಿದರು.

ಆ ಅರಸನನ್ನು ಮ್ಲೇಚ್ಛರಾಜನು ಜಯಿಸಿದ್ದುದರ ಗುರುತಾಗಿ ಅವನ ಕೈಬೆರಳನ್ನು ಕತ್ತರಿಸಿದ್ದುದರಿಂದ "ಬೆಟ್ಟಿಲ" ಎಂದು ಪ್ರಸಿದ್ಧನಾಗಿದ್ದನು. ಅಂಗಹೀನನೆಂದು ಬಂಧು ಜನಗಳೆಲ್ಲರೂ ಅವನನ್ನು ಬಹಿಷ್ಕಾರ ಮಾಡಿರಲು, ಆರ್ತನಾದ ಅವನು ಶ್ರೀರಾಮಾನುಜಾಚಾರ್ಯರನ್ನು ಪ್ರಾರ್ಥಿಸಿದನು. ಆಗ ಅವರು "ಶ್ರೀಮನ್ನಾರಾಯಣನೇ ಪರತತ್ತ್ವವು, ಅವನ ದಾಸ್ಯವೇ ಸಕಲಾತ್ಮ ಸ್ವರೂಪವು, ಅಂತಹ ಸರ್ವಸ್ವಾಮಿಯ ಸರ್ವವಿಧ ಸೇವೆಯೇ ಪರಮಪುರುಷಾರ್ಥವು" ಎಂದಿವೇ ಮೊದಲಾದ ಅನೇಕಾರ್ಥ ವಿಶೇಷಗಳನ್ನೂ ಉಪದೇಶ ಮಾಡಿದರು. ಅದರಿಂದ ಬೆಟ್ಟಿಲದೇವನಿಗೆ "ಇಂತಹ ತತ್ತ್ವಹಿತ ಪುರುಷಾರ್ಥಗಳನ್ನು ನಮ್ಮ ಹೃದಯದಲ್ಲಿ ದೃಢವಾಗಿ ನಿಲ್ಲುವಂತೆ ಉಪದೇಶ ಮಾಡಿ ನಮ್ಮ ಆತ್ಮೋಜ್ಜೀವನ ಮಾಡಿದ ಈ ರಾಮಾನುಜಾಚಾರ್ಯರಿಗಿಂತಲೂ ಮತ್ತೊಂದು ಪರದೈವವುಂಟೇ?" ಎಂಬಷ್ಟು ಹೃದಯ ಪರಿಪಾಕ ಉಂಟಾದ ಮೇಲೆ ಅವನನ್ನು ವೈಷ್ಣವನನ್ನಾಗಿ ಮಾಡಿ "ವಿಷ್ಣುವರ್ಧನ" ಎಂದು ಅವನಿಗೆ ಹೆಸರಿಟ್ಟರು. ಅವನ ಮಗಳಿಗೆ ಹಿಡಿದಿದ್ದ ಯಾವುದೋ ಒಂದು ಕ್ರೂರವಾದ ಗ್ರಹವನ್ನು ತಮ್ಮ ಶ್ರೀಪಾದತೀರ್ಥ ಪ್ರೋಕ್ಷಣದಿಂದಲೇ ಬಿಡಿಸಿ, ಅಲ್ಲಿರುವ ನೃಸಿಂಹಸ್ವಾಮಿಯವರ ದೇವಸ್ಥಾನದಲ್ಲಿ ತಮ್ಮ ಶಿಷ್ಯರಿಗೆ ಉಭಯವೇದಾನ್ತ ಪ್ರವಚನ ಮಾಡುತ್ತಾ ಅಲ್ಲಿಯೇ ದಯಮಾಡಿಸಿದ್ದರು.

ಹೀಗೆ ರಾಮಾನುಜಾಚಾರ್ಯರು ಬೆಟ್ಟಿಲದೇವನನ್ನು ವೈಷ್ಣವನನ್ನಾಗಿ ಮಾಡಲು, "ಪದ್ಮಗಿರಿ" (ಶ್ರವಣಬೆಳಗೊಳ) ಯಲ್ಲಿದ್ದ ಸಾವಿರಾರು ಜೈನಮತ ವಿದ್ವಾಂಸರುಗಳು ಒಟ್ಟಿಗೆ ಬಂದು "ನಮ್ಮನ್ನು ವಾದದಲ್ಲಿ ಜಯಿಸದೆಯೇ ನಮ್ಮ ರಾಜನನ್ನು ನೀವು ನಿಮ್ಮ ಮತಕ್ಕೆ ಹೇಗೆ ಸೇರಿಸಿಕೊಳ್ಳುವಿರಿ? ನಮ್ಮೊಡನೆ ವಾದ ಮಾಡಿ" ಎಂದು ಹೇಳಿ ಅವರನ್ನು ಸುತ್ತಿಕೊಂಡರು. ಆಗ ರಾಮಾನುಜಾಚಾರ್ಯರು, ಒಬ್ಬರೇ ಅನೇಕ ಜನಗಳೊಡನೆ ಏಕಕಾಲದಲ್ಲಿ ವಾದಮಾಡುವುದಕ್ಕಾಗದ ಕಾರಣ "ಸೋತುಹೋದರು" ಎಂಬ ಅಪವಾದವನ್ನು ಪರಿಹರಿಸಿಕೊಳ್ಳುವ ನೆಪದಿಂದ ಸುತ್ತಲೂ ತೆರೆಯನ್ನು ಕಟ್ಟಿಸಿ ಒಳಗೆ ತಾವು ಒಬ್ಬರೇ ಕುಳಿತುಕೊಂಡು ಅವರೆಲ್ಲರನ್ನೂ ತೆರೆಯ ಹೊರಗೆ ಸುತ್ತಲೂ ಕುಳ್ಳಿರಿಸಿ, ಸಹಸ್ರಮುಖನಾದ ಆದಿಶೇಷನ ರೂಪವನ್ನು ಪರಿಗ್ರಹಿಸಿ ಪ್ರತಿಯೊಬ್ಬರಿಗೂ ಪ್ರತ್ಯುತ್ತರ ಹೇಳಿ ಅವರ ಮತವನ್ನೆಲ್ಲಾ ಖಂಡಿಸಿ ಸೋಲಿಸಿ ಬೆಟ್ಟಿಲದೇವನ ವೈಷ್ಣವತ್ವವನ್ನು ಸ್ಥಾಪನೆ ಮಾಡಿದರು.

ರಾಮಾನುಜಾಚಾರ್ಯರು ತೊಂಡನೂರಿನಲ್ಲಿ ದಯಮಾಡಿಸಿರುವಾಗ ಒಂದು ದಿವಸ ಊರ್ಧ್ವಪುಂಡ್ರಕ್ಕಾಗಿ ಧರಿಸುವ ಶ್ವೇತ ಮೃತ್ತಿಕೆಯು (ಬಿಳಿಯ ನಾಮದ ಮಣ್ಣು) ಮುಗಿದು ಹೋಗಲು, ಎಲ್ಲಿ ಸಂಪಾದಿಸುವುದೆಂದು ಚಿಂತಾಕ್ರಾಂತರಾಗಿ ಮಲಗಲು, ರಾತ್ರಿ ಸ್ವಪ್ನದಲ್ಲಿ ತಿರುನಾರಾಯಣ ಸ್ವಾಮಿ

ಯವರು ಬಂದು "ಈ ಯಾದವಗಿರಿಯಲ್ಲಿ ನನ್ನ ಅಪ್ಪಣೆಯ ಪ್ರಕಾರ ಗರುಡನು ಶ್ವೇತದ್ವೀಪದಿಂದ ತಂದು ಸ್ಥಾಪಿಸಿರುವ ಅಕ್ಷಯವಾದ ಶ್ವೇತಮೃತ್ತಿಕೆಯು ಇದೆ. ಅದನ್ನು ತೆಗೆದು ಉಪಯೋಗಿಸಿರಿ. ಈ ಕಲ್ಯಾಣೀ ತೀರವಾಸಿಯಾದ ನನ್ನನ್ನೂ ಜೀರ್ಣೋದ್ಧಾರ ಮಾಡಿರಿ" ಎಂದು ಹೇಳಿದರು.

ಬೆಳಿಗ್ಗೆ ಎದ್ದು ಈ ಸ್ವಪ್ನವೃತ್ತಾಂತವನ್ನು ರಾಜನಿಗೂ ತಮ್ಮ ಶಿಷ್ಯರಿಗೂ ಹೇಳಿ ಅತ್ಯಾಶ್ಚರ್ಯಪಡುತ್ತಾ ಶಿಷ್ಯರೊಡನೆ ಅಲ್ಲಿಂದ ಉತ್ತರಕ್ಕೆ ಹೊರಟು ದುರ್ಗಮವಾದ ಆ ಯಾದವಾದ್ರಿಯನ್ನು ಏರಿ ವೇದ ಪುಷ್ಕರಿಣೀ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿನ ಪರಿಧಾನ ಶಿಲೆಯಲ್ಲಿ ತ್ರಿದಂಡ ಕಾಷಾಯಗಳನ್ನು ಪುನಃ ಪರಿಗ್ರಹಿಸಿ, ಸ್ವಪ್ನದಲ್ಲಿ ಹೇಳಿದ ನಾರಾಯಣನನ್ನು ಹುಡುಕಿದರೂ ಇರುವ ಸ್ಥಳವು ತಿಳಿಯಲಿಲ್ಲ.

ಆದುದರಿಂದ ಚಿಂತಾಕ್ರಾಂತರಾಗಿ ಧ್ಯಾನಿಸುತ್ತಿರುವಾಗ ಇವರ ಕಿವಿಯಲ್ಲಿ "ಏತಕ್ಕೆ ಯೋಚನೆ ಮಾಡುವಿರಿ? ಇಲ್ಲಿಂದ ತುಳಸೀಗಿಡಗಳ ಸಾಲಿನ ಗುರುತಿನ ಮೇಲೆ ಉತ್ತರ ದಿಕ್ಕಿಗೆ ಬನ್ನಿ. ಕಲ್ಯಾಣಿಯ ಸ್ವಲ್ಪದೂರದಲ್ಲಿ ನೈಋತ್ಯ ದಿಕ್ಕಿನಲ್ಲಿ ದೊಡ್ಡದಾದ ಒಂದು ಹುತ್ತವಿರುವುದು. ಅದರ ಮೇಲೆ ಒಂದು ದೊಡ್ಡ ತುಳಸೀಗಿಡವಿರುವುದು. ಆ ಹುತ್ತದೊಳಗೆ ನಾನಿರುವೆನು. ಈ ಕಲ್ಯಾಣಿಯ ಪಶ್ಚಿಮದಲ್ಲಿ ಶ್ವೇತ ಮೃತ್ತಿಕೆ ಇರುವುದು. ಚಿಂತೆಯನ್ನು ಬಿಟ್ಟು ಏಳಿ" ಎಂದು ಹೇಳಿದಂತಾಯಿತು.

ಅನಂತರ ಅದೇ ರೀತಿ ಉತ್ತರಕ್ಕೆ ಹೊರಟು, ತುಳಸೀಗಿಡಗಳ ಸಾಲಿನ ಗುರುತು ಹಿಡಿದುಕೊಂಡು ಹೋಗಿ ಕಲ್ಯಾಣೀತೀರ್ಥದಲ್ಲಿ ಸ್ನಾನಮಾಡಿ, ಆ ಕಲ್ಯಾಣಿಯ ಪಶ್ಚಿಮದಲ್ಲಿರುವ ತಾರ್ಕ್ಷ್ಯಕ್ಷೇತ್ರದಲ್ಲಿ ಶ್ವೇತಮೃತ್ತಿಕೆಯನ್ನು ಸ್ವೀಕರಿಸಿ, ದ್ವಾದಶೋರ್ಧ್ವಪುಂಡ್ರಗಳನ್ನು ಧರಿಸಿ, ಕಲ್ಯಾಣಿಯ ನೈಋತ್ಯ ದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿ ದೊಡ್ಡ ಹುತ್ತವನ್ನೂ ಅದರ ಮೇಲೆ ದೊಡ್ಡ ತುಳಸೀಗಿಡವನ್ನೂ ನೋಡಿ, ಬಹಳ ಸಂತೋಷದಿಂದ ಆ ಹುತ್ತವನ್ನು ಗುದ್ದಲಿಗಳಿಂದ ಕಡಿಸಿ ಅದರೊಳಗೆ ಆನಂದಮಯ ದಿವ್ಯ ವಿಮಾನವನ್ನೂ, ಅದರ ಗರ್ಭಗೃಹದ ಮಧ್ಯದಲ್ಲಿ ಶ್ರೀಮನ್ನಾರಾಯಣ ಮೂರ್ತಿಯನ್ನೂ ದರ್ಶನಮಾಡಿ ಆನಂದ ಹೊಂದಿ ಅನೇಕ ಕಲಶಪೂರಿತವಾದ ಕ್ಷೀರದಿಂದ ಅಭಿಷೇಕ ಮಾಡಿದರು.

ಹೀಗೆ ಕ್ಷೀರಾಭಿಷೇಕ ಮಾಡಿ ಆ ದಿವ್ಯಸುಂದರ ದಿವ್ಯಮೂರ್ತಿಯನ್ನು ದರ್ಶನಮಾಡಿ ಪರಮಾನಂದಭರಿತರಾಗಿ ಪರವಶರಾಗಿರಲು, ಶ್ರೀ ಪರಾಂಕುಶ ಮುನಿಗಳು (ನಮ್ಮಾಳ್ವಾರರು) "ನಾನು ಹೇಳಿರುವ 'ಒರುನಾಯಕ' ಎಂಬ ತಿರುವಾಯ್‌ಮೊಳಿಯನ್ನು ನೀವು ನಾರಾಯಣನಿಗೆ ಸಮರ್ಪಣೆ ಮಾಡಿರಿ" ಎಂದು ಮಾನಸಸಾಕ್ಷಾತ್ಕಾರವಾಗಿ ಅಪ್ಪಣೆ ಕೊಡಿಸಲು ತಿರುವಾಯ್‌ಮೊಳಿ ಎಂಬ ಸಾವಿರ ಪದ್ಯಗಳ ಮಧ್ಯದಲ್ಲಿ ನಾಲ್ಕನೆಯ ಶತಕದ ಮೊದಲನೆಯ ಹತ್ತು ಪದ್ಯಗಳನ್ನು ತಿರುನಾರಾಯಣಸ್ವಾಮಿಗೆ ಸಮರ್ಪಿಸಿದರು. ಆ ಹತ್ತು ಪದ್ಯಗಳಲ್ಲಿ "ಐಶ್ವರ್ಯವು ಅಲ್ಪಾಸ್ಥಿರತ್ವಾದಿ ದೋಷಗಳಿಂದಲೂ, ಕೈವಲ್ಯವು ನಿತ್ಯಾಲ್ಪ ಸುಖವಾದುದರಿಂದಲೂ, ತ್ಯಾಜ್ಯಗಳು. ಆದುದರಿಂದ ತಿರುನಾರಾಯಣನ ಪಾದಾರವಿಂದಗಳನ್ನು ಸ್ಮರಣೆ ಮಾಡಿ ಧನ್ಯರಾಗಿ" ಎಂದು ಹೇಳಲ್ಪಡುತ್ತದೆ.

## ಪೂಜೆಗೆ ಶ್ರೀರಂಗದಿಂದ ಅರ್ಚಕರನ್ನು ಕರೆಸಿದ್ದು

ಅನಂತರ ರಾಮಾನುಜಾಚಾರ್ಯರು ಮೂರು ದಿವಸಗಳವರೆಗೆ ನಾರಾಯಣ ಸ್ವಾಮಿಯವರಿಗೆ ತಮ್ಮ ಕೈಯಿಂದಲೇ ಆರಾಧನ ಮಾಡಿ ಅನಂತರ ನಿತ್ಯವೂ ಆರಾಧನ ಮಾಡುವುದಕ್ಕಾಗಿ ಶ್ರೀರಂಗದಿಂದ ಪಾಂಚರಾತ್ರಾದಿ ಸಕಲಶಾಸ್ತ್ರ ಪ್ರವೀಣರಾದ ಶ್ರೀರಂಗರಾಜಭಟ್ಟರೆಂಬ ಅರ್ಚಕರನ್ನು ಕರೆಸಿ ಸಾತ್ವತ ಸಂಹಿತೋಕ್ತ ಪ್ರಕಾರ ಪ್ರತಿಷ್ಠಾದಿಗಳನ್ನು ಮಾಡಿಸಿ ನಿತ್ಯಾರಾಧನ ಮಾಡಿಸುತ್ತಿದ್ದರು. ಹಾಗಾದರೂ "ಈ ನಾರಾಯಣಸ್ವಾಮಿಗೆ ಅನುರೂಪವಾದ ಉತ್ಸವಮೂರ್ತಿ ಎಲ್ಲಿರುವರೋ" ಎಂಬ ಚಿಂತೆ ಇವರನ್ನು ಕಾಡುತ್ತಲೇ ಇತ್ತು.

ಹೀಗೆ ಚಿಂತಿಸುತ್ತಿದ್ದಂತೆಯೇ ತಿರುನಾರಾಯಣಸ್ವಾಮಿಯವರು ಸ್ವಪ್ನದಲ್ಲಿ "ನನ್ನ ಉತ್ಸವ ಮೂರ್ತಿಯು ದಿಲ್ಲಿ ಬಾದಶಹ (ಸುಲ್ತಾನ)ನ ಮನೆಯಲ್ಲಿದೆ. ಆ ಮೂರ್ತಿಯನ್ನು ಬಿಜಯಮಾಡಿಸಿಕೊಂಡು ಬನ್ನಿ" ಎಂದು ಹೇಳಲು, ರಾಮಾನುಜಾಚಾರ್ಯರು ದಿಲ್ಲಿಗೆ ದಯಮಾಡಿಸಿದರು. ಬಂದ ಕಾರಣವನ್ನು ಸುಲ್ತಾನನು ಕೇಳಲು, ಹೇಳಿ, ಅವನ ಆಜ್ಞಾಪ್ರಕಾರ ತಾವೇ ಹೋಗಿ, ಅನೇಕ ಕಡೆಯ ನಾನಾ ವಿಗ್ರಹಗಳು ರಾಶಿ ರಾಶಿಯಾಗಿ ಇಡಲ್ಪಟ್ಟಿದ್ದ ಜಾಗದಲ್ಲಿ ಹುಡುಕಿದರೂ ಚೆಲುವರಾಯ ಸ್ವಾಮಿಯು ದೊರಕಲಿಲ್ಲ.

ಆಗ ಮತ್ತೆ ಚಿಂತಾಕ್ರಾಂತರಾಗಿ ಮಲಗಿರಲು, ಸ್ವಪ್ನದಲ್ಲಿ ಚೆಲುವರಾಯಸ್ವಾಮಿಯು "ನಾನು ರಾಜನ ಅಂತಃಪುರದಲ್ಲಿ ರಾಜಪುತ್ರಿಯ ಭೋಗದಲ್ಲಿದ್ದೇನೆ, ನನ್ನನ್ನು ನಿಮ್ಮ ಸಮೀಪಕ್ಕೆ ಕೂಗಿ ಕರೆದುಕೊಳ್ಳಿ" ಎಂದು ಅಪ್ಪಣೆ ಕೊಡಿಸಿದರು. ಅನಂತರ ರಾಮಾನುಜಾಚಾರ್ಯರು ಆ ರಾಜನೊಡನೆ "ನನ್ನ ದೇವರು ನಿಮ್ಮ ಅಂತಃಪುರದಲ್ಲಿದ್ದಾರೆ. ಅವರನ್ನು ನನಗೆ ಕೊಡಿಸಬೇಕು" ಎಂದು ಕೇಳಿದರು.

ಅವರು ಹೀಗೆ ಕೇಳಲು ರಾಜನು ಇವರನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗಿ "ನಿಮ್ಮ ದೇವರು ಇಲ್ಲಿದ್ದ ಪಕ್ಷದಲ್ಲಿ ಕೂಗಿ ಕರೆದುಕೊಳ್ಳಿ" ಎಂದು ಹೇಳಲು ರಾಮಾನುಜಾಚಾರ್ಯರು "ನನ್ನ ರಾಮಪ್ರಿಯನೇ ಬಾ" ಎಂದು ಕೂಗಿ ಕರೆಯಲು ಆ ರಾಮಪ್ರಿಯನು ಸುಮಾರು ಎರಡು ಮೂರು ವಯಸ್ಸುಳ್ಳ ಮಗುವಾಗಿ ಸರ್ವಾಭರಣಭೂಷಿತನಾಗಿ ಕಾಲುಗೆಜ್ಜೆಯನ್ನು ಸದ್ದುಮಾಡಿಕೊಂಡು ಎಡವುತ್ತಾ 'ಏನು ತಂದೆ' ಎಂದು ಗೊಣಗುತ್ತಾ ಓಡಿ ಬಂದು ಇವರ ತೊಡೆಯಮೇಲೆ ಕುಳಿತುಕೊಳ್ಳಲು ರಾಮಾನುಜಾಚಾರ್ಯರು "ನನ್ನ ಸಂಪತ್ಕುಮಾರ (ಶೆಲ್ವಪ್ಪಿಳ್ಳೈ)ನೇ" ಎಂದು ಹೇಳಿ ತಬ್ಬಿಕೊಂಡು ಪ್ರೀತಿಯಿಂದ ತಲೆಯ ಮೇಲೆ ಮೂಸಿ ನೋಡುತ್ತಾ ಅಪಾರವಾದ ಆನಂದ ಸಮುದ್ರದಲ್ಲಿ ಮುಳುಗಿಹೋದರು. ಇದನ್ನೆಲ್ಲವನ್ನೂ ಪ್ರತ್ಯಕ್ಷದಲ್ಲಿ ನೋಡುತ್ತಿದ್ದ ಬಾದಶಹನು ಬಹಳ ಆಶ್ಚರ್ಯಗೊಂಡು ಛತ್ರಚಾಮರಾಂದೋಳಿಕಾ ವಸ್ತ್ರಾಭರಣ ಗಂಧಪುಷ್ಪಫಲ ಧೂಪದೀಪಾದಿ ಸಕಲ ವಿಧೋಪಚಾರಗಳಿಂದಲೂ ಚೆಲುವರಾಯಸ್ವಾಮಿಯನ್ನುಪಚರಿಸಿ ಪಾಲಕಿಯಲ್ಲಿ ಬಿಜಯಮಾಡಿಸಿ, ರಾಮಾನುಜಾಚಾರ್ಯರನ್ನೂ ಬಹಳ ಮರ್ಯಾದೆಗಳಿಂದ ಪೂಜಿಸಿ, ಅವರ ಸಂಗಡ ಸಕಲ ವಾದ್ಯಾದಿ ಬಿರುದುಗಳೊಡನೆ ಕಳುಹಿಸಿಕೊಡಲು ಆ ರಾಜಪುತ್ರಿಯು ಈ ಚೆಲುವರಾಯ ಸ್ವಾಮಿಯನ್ನು ಬಿಟ್ಟಿರಲಾರದೆ ತಾನೂ ಸಂಗಡ ಹೊರಟಳು.

ಈ ರೀತಿ ರಾಮಾನುಜಾಚಾರ್ಯರು ಯತಿರಾಜ ಸಂಪತ್ಕುಮಾರನನ್ನು ಬಹಳ ವಿಜೃಂಭಣೆಯಿಂದ ಬಿಜಯಮಾಡಿಸಿಕೊಂಡು ಬಂದು ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ, ಬ್ರಹ್ಮೋತ್ಸವಾದಿಗಳನ್ನು ನಡೆಸುತ್ತಾ "ಯತಿರಾಜಮಠ" ಎಂಬ ಒಂದು ಮಠವನ್ನೂ ಕಟ್ಟಿಸಿ ಅಲ್ಲಿ ಶ್ರೀ ಭಾಷ್ಯಾದಿ ಪ್ರಬಂಧಾಮೃತವನ್ನು ನಿತ್ಯವೂ ಬ್ರಾಹ್ಮಣರಿಗೆ ಪಾನಮಾಡಿಸುತ್ತಾ ತಿರುನಾರಾಯಣ, ಚೆಲುವರಾಯಸ್ವಾಮಿಗಳವರ ಸರ್ವವಿಧ ಕೈಂಕರ್ಯಗಳನ್ನೂ ಸರ್ವಕಾಲಗಳಲ್ಲಿಯೂ ನಡೆಸುತ್ತಾ, ತಮ್ಮ ಸ್ವಾಮಿಯಾದ ಶ್ರೀರಂಗನಾಥನ ವಿರಹವನ್ನು ಮರೆತು, ಹನ್ನೆರಡುವರ್ಷ ಕಾಲ ಈ ಯಾದವಗಿರಿಯಲ್ಲೇವಾಸ ಮಾಡಿಕೊಂಡಿದ್ದರು.

## ಚೋಳಭೂಪನ ಮರಣ ಕೇಳಿದುದು

ಹೀಗಿರುವಲ್ಲಿ ಒಂದು ದಿವಸ ಕಲ್ಯಾಣಿಯಲ್ಲಿ ಸ್ನಾನಕ್ಕೋಸ್ಕರ ರಾಮಾನುಜಾಚಾರ್ಯರು ದಯಮಾಡಿಸಿದ್ದಾಗ, ಶ್ರೀರಂಗದಿಂದ ದಯಮಾಡಿಸಿದ

"ಮಾರುರಿಚ್ಚೆರಿಯಾಂಡಾನ್" ಎಂಬುವರು ಬಂದು ರಾಮಾನುಜಾಚಾರ್ಯರಿಗೆ ನಮಸ್ಕಾರ ಮಾಡಿ "ತಾವು ಶ್ರೀರಂಗದಿಂದ ಈ ಕಡೆಗೆ ದಯಮಾಡಿಸಿದ ಮೇಲೆ ನಿಮ್ಮ ಶಿಷ್ಯರಾದ ಕೂರತ್ತಾಳ್ವಾರರಿಗೂ ನಿಮ್ಮ ಆಚಾರ್ಯರಾದ ಪೆರಿಯನಂಬಿಗಳವರಿಗೂ ಯಾವ ಪಾಪಿಯು ಕಣ್ಣುಗಳನ್ನು ಕೀಳಿಸಿದನೋ, ಆ ಚೋಳನ ಕತ್ತಿನಲ್ಲಿ ಯಾವುದೋ ಹುಣ್ಣಾಗಿ ಅದರಲ್ಲಿ ಹುಳು ಬಿದ್ದು ಅದರಿಂದ ಬಹಳ ಹಿಂಸೆಯನ್ನನುಭವಿಸಿ ಕೊನೆಗೆ ಅದರಿಂದಲೇ ಸತ್ತನು" ಎಂದು ವಿಜ್ಞಾಪಿಸಿದರು.

ಆಗ ರಾಮಾನುಜಾಚಾರ್ಯರು ಆ ಮಾತನ್ನು ಕೇಳಿ, ಈ ತೀರ್ಥಕ್ಕೆ "ಕಲ್ಯಾಣಿ" ಎಂಬ ಹೆಸರು ಇದುವರೆವಿಗೂ ರೂಢನಾಮ ಮಾತ್ರವಾಗಿತ್ತು. ಈಗ ಯೌಗಿಕವಾಗಿಯೂ ಆಯಿತು. ಅಂದರೆ ಇಲ್ಲಿ ಶುಭ ಸಮಾಚಾರವನ್ನು ಕೇಳಿದುದರಿಂದ, ಇದು ಕಲ್ಯಾಣಿಯೇ ಸರಿ. "ಕಲ್ಯಾಣಿ" ಅಂದರೆ ಮಂಗಳ ಎಂದು ಹೇಳಿ ಸ್ನಾನ ಮಾಡಿ ಅಲ್ಲಿಂದ ನೃಸಿಂಹಸ್ವಾಮಿಯ ಬೆಟ್ಟಕ್ಕೆ ದಯಮಾಡಿಸಿ, ನೃಸಿಂಹಸ್ವಾಮಿಯೊಡನೆ "ಸ್ವಾಮಿ, ಯೋಗಾನೃಸಿಂಹನೇ! ನಾನು ಸಾಲಗ್ರಾಮದಲ್ಲಿದ್ದಾಗ ಚೋಳನ ವಿಷಯವಾಗಿ ನಿಮ್ಮಲ್ಲಿ ಪ್ರಾರ್ಥಿಸಿದುದು, ಪರಮದಯಾಳುವೂ, ದೀನಬಂಧುವೂ, ಆಗಿರುವ ನಿಮ್ಮಿಂದ ಈಗ ಸಫಲ ಮಾಡಲ್ಪಟ್ಟಿತು" ಎಂದು ವಿಜ್ಞಾಪಿಸಿದರು.

## ಆಲಯನಿರ್ಮಾಣ

ಅನಂತರ ರಾಮಾನುಜಾಚಾರ್ಯರು ಆ ಆನಂದಮಯ ದಿವ್ಯವಿಮಾನದ ಸುತ್ತಲೂ ರಮ್ಯವಾದ ದೇವಸ್ಥಾನವನ್ನು ಕಟ್ಟಿಸಿದರು (ಗರ್ಭಗುಡಿ ಮತ್ತು ಶುಕನಾಸ ಮಾತ್ರ) ಅನಂತರ ಛತ್ರ, ಚಾಮರ, ವ್ಯಜನ, ಕಳಾಚಿಕಾ (ಪೀಕದಾನಿ), ತಾಂಬೂಲಿಕೆ ಓಡ (ಹಡಪ), ಕನ್ನಡಿ, ಕಡುಗ ಇವೇ ಮೊದಲಾದ ಸಕಲ ವಿಧ ಕೈಂಕರ್ಯಗಳನ್ನೂ ಮಾಡುವುದಕ್ಕೋಸ್ಕರ ಆಳ್ವಾರ್‌ತಿರುನಗರಿಯ ಕಡೆಯಿಂದ ೫೨ ಚೋಳಿ (ಪುರಶ್ಶಿಖಿ) ಯವರ ಕುಟುಂಬಗಳನ್ನು ಕರೆಸಿ ಅವರಿಗೆ "ಐಂಬತ್ತಿರುವರ್" ಎಂದು ಹೆಸರು ಕೊಟ್ಟು ೫೨ ಊಳಿಗ (ಕೈಂಕರ್ಯ)ಗಳನ್ನು ಮಾಡಲು ನೇಮಿಸಿದರು. ಅವರಲ್ಲಿಯೂ ೧, ೨, ೩, ೪ ನೇ ಸ್ವಾಮ್ಯಗಳೆಂದು ನಾಲ್ಕುಪಂಗಡ ಮಾಡಿ ಅವರಿಗೆ ಕ್ರಮವಾಗಿ "ತಿರುವನಂತಪುರದಾಸರ್", "ತಿರುಮಾಲ್ಕೆದಾಸರ್", "ತಿರುಕ್ಕುರುಂಕುಡಿದಾಸರ್", "ಯತಿರಾಜದಾಸರ್" ಎಂಬ ಪ್ರತ್ಯೇಕ ದಾಸ್ಯನಾಮಗಳನ್ನೂ ಕೊಟ್ಟು, ಅವರಿಗೆಲ್ಲಾ ಮನೆಗಳನ್ನೂ ಕಟ್ಟಿಸಿಕೊಟ್ಟು ಜ್ಞಾನೋಪದೇಶವನ್ನೂ ಮಾಡಿ, "ಚೆಲುವರಾಯಸ್ವಾಮಿಯನ್ನು ಬಾವಿಯ ತಡಿಯಲ್ಲಿರುವ ಮಗುವನ್ನು ಕಂಡಂತೆ, ಭಯಭಕ್ತಿಗಳಿಂದ ಸದಾ ಜಾಗರೂಕತೆಯಿಂದ ನೋಡಿಕೊಂಡು ಮಂಗಳಾಶಾಸನ ಪರರಾಗಿರಿ" ಎಂದು ಹೇಳಿ, ತಮ್ಮ ಆಸ್ತಿಯನ್ನು ಮತ್ತೊಬ್ಬರ ಕೈಯಲ್ಲಿ, ಕೇಳಿದಾಗ ಕೊಡುವಹಾಗೆ ಹೇಳಿಕೊಡುವಂತೆ ಕೊಟ್ಟರು.

## ವಿಭವರೂಪಿ

ಹೀಗೆ ರಾಮಾನುಜಾಚಾರ್ಯರು, ತಿರುನಾರಾಯಣಸ್ವಾಮಿಯವರಿಗೂ ಶ್ರೀ ಸಂಪತ್ಕುಮಾರನಿಗೂ ಯಾವ ಭಾಗದಲ್ಲಿಯೂ ಯಾವ ಕೊರತೆಯೂ ಇಲ್ಲದಂತೆ ಎಲ್ಲಾ ಏರ್ಪಾಡುಗಳನ್ನೂ ಮಾಡಿದರು ಅನಂತರ ತಮಗೂ, ಶ್ರೀರಂಗನಾಥನಿಗೂ "ಶರಣಾಗತಿ ಗದ್ಯ" ರೂಪವಾದ ಸಂವಾದ ನಡೆದಾಗ "ಯಾವಚ್ಛರೀರಪಾತಮತ್ರೈವ ಶ್ರೀರಂಗೇ ಸುಖಮಾಸ್ವ" (ಈ ಶರೀರವಿರುವವರೆಗೂ ಈ ಶ್ರೀರಂಗದಲ್ಲಿಯೇ ನಿತ್ಯವಾಸ ಮಾಡಿಕೊಂಡಿರಿ) ಎಂದು ಶ್ರೀರಂಗನಾಥನು ಅಪ್ಪಣೆ ಕೊಡಿಸಿದ್ದು ಜ್ಞಾಪಕಕ್ಕೆ ಬರಲು, ಚೋಳನ ಬಾಧೆಯೂ ತಪ್ಪಿರಲು ಇಲ್ಲಿಯೂ ಅವಶ್ಯಕವಾಗಿ ಮಾಡಬೇಕಾದ ಕೆಲಸಗಳೂ ಮುಗಿದಿರಲು, ತಾವು ಶ್ರೀರಂಗಕ್ಕೆ ಪ್ರಮಾಣ ಮಾಡಲು ಉದ್ದೇಶಿಸಿ ಶ್ರೀ ತಿರುನಾರಾಯಣಸ್ವಾಮಿಯವರನ್ನು ಅಪ್ಪಣೆ ಕೇಳಲು, ಅವರಿಗೆ ಇಷ್ಟವಿಲ್ಲದೆ ಇದ್ದುದರಿಂದ ಪ್ರತ್ಯುತ್ತರ ಹೇಳದೆ ಸುಮ್ಮನಿದ್ದರು ಇವರಿಗೂ ಚೆಲುವರಾಯ ಸ್ವಾಮಿಯವರಲ್ಲಿದ್ದ ಪುತ್ರವಾತ್ಸಲ್ಯವು ಪ್ರಯಾಣಕ್ಕೆ ತಡೆಮಾಡಿತು. ಐಂಬತ್ತಿರುವರೂ ಕೂಡ ಈ ರಾಮಾನುಜಾಚಾರ್ಯರ ಪಾದಾರವಿಂದಗಳನ್ನು ಹಿಡಿದುಕೊಂಡು "ಆಚಾರ್ಯರೇ! ಚೆಲುವರಾಯಸ್ವಾಮಿಯು ನಿಮ್ಮದೇವರು. ನಿಮ್ಮದೇವರನ್ನು ನೋಡಿಕೊಳ್ಳುವ ಕೆಲಸ ನಿಮ್ಮದು ನಮ್ಮದೇವರು ನೀವು. ನೀವು ಎಲ್ಲಿಗೆ ಹೋಗುತ್ತೀರೋ ಅಲ್ಲಿಗೇ ನಾವೂ ಬರುವೆವು" ಎಂದು ವಿಜ್ಞಾಪಿಸಿದರು

ಈ ಮೂರು ವಿಧವಾದ ಅಡ್ಡಿಗಳು ಬರಲು ರಾಮಾನುಜಾಚಾರ್ಯರು, "ಆ ಕಡೆ ಶ್ರೀರಂಗನಾಥನ ಅಪ್ಪಣೆ, ಈ ಕಡೆ ತಿರುನಾರಾಯಣನ ಅಪ್ಪಣೆ, ನನಗೂ ಬಿಟ್ಟು ಹೋಗುವುದಕ್ಕೆ ಮನಸ್ಸಿಲ್ಲ. ಐಂಬತ್ತಿರುವರು ನನ್ನನ್ನು ಬಿಟ್ಟಿರುವುದಿಲ್ಲ ಅವರು ಹೊರಟುಹೋದಮೇಲೆ ಇಲ್ಲಿ ನಾವು ಇಷ್ಟು ಮಾಡಿದ್ದೂ ವ್ಯರ್ಥವಾಗುವುದು" ಎಂದು ಬಹಳ ವಿಧವಾಗಿ ಯೋಚನೆ ಮಾಡಿ ಪರಿಹಾರಕ್ರಮವನ್ನೂ ನಾನಾವಿಧವಾಗಿ ಯೋಚಿಸಿದರೂ ಸರಿಹೋಗದೆ ಕೊನೆಗೆ ಎರಡು ಕಡೆಗಳಲ್ಲೂ ನಾವಿದ್ದೇ ತೀರಬೇಕೆಂದು ತೀರ್ಮಾನ ಮಾಡಿಕೊಂಡು, ಬಹಳ ಬುದ್ಧಿವಂತನಾದ ಶಿಲ್ಪಿಯನ್ನು ಕರೆಸಿ, ತಮ್ಮ ಅಂಗಪ್ರತ್ಯಂಗಗಳಲ್ಲಿ ಯಾವುದರಲ್ಲಿಯೂ ಸ್ವಲ್ಪವೂ ವ್ಯತ್ಯಾಸ ಬರದಂತೆ, ತಮ್ಮಂತೆಯೇ ಇರುವ ಒಂದು ವಿಗ್ರಹವನ್ನು ಮಾಡಿಸಿ ಅದಕ್ಕೆ ಪಾಂಚರಾತ್ರಶಾಸ್ತ್ರದ ಭಕ್ತ ವಿಗ್ರಹ ಪ್ರತಿಷ್ಠಾಕ್ರಮದಂತೆ ಪ್ರತಿಷ್ಠೆ ಮಾಡಿಸಿ ಪ್ರಾಣಪ್ರತಿಷ್ಠೆ ಮಾಡುವ ಸಂದರ್ಭದಲ್ಲಿ ತಾವೇ ತಮ್ಮ ಯೋಗಶಕ್ತಿಯಿಂದ ಆ ವಿಗ್ರಹ ದೊಳಗೆ ಸಾನ್ನಿಧ್ಯಮಾಡಿ, ಆ ಐಂಬತ್ತಿರುವರ ನಂಬಿಕೆಗಾಗಿ ತಾವು ಹೊರಗೆ ನಿಂತು ತೆರೆಯೊಳಗೆ ಇರುವ ಆ ವಿಗ್ರಹದ ಮೂಲಕ ಅವರೊಡನೆ ಮಾತನಾಡಿ "ಇನ್ನು ಮೇಲೆ ನಾನು ಇಲ್ಲಿ ವಿಭವಾವತಾರದಿಂದಲೇ ಇದ್ದೇನೆಂದು ಭಾವಿಸಿ, ನಿಮ್ಮ ನಿಮ್ಮ ಭಗವತ್ಕೈಂಕರ್ಯದಲ್ಲಿ ನಿರತರಾಗಿರಿ" ಎಂದು ಅಪ್ಪಣೆ ಮಾಡಿ ಎಲ್ಲರಿಗೂ ಸಂತೋಷವುಂಟಾಗುವುದಕ್ಕೋಸ್ಕರ ಅಲ್ಲಿಯೇ ನಿತ್ಯವಾಸವನ್ನು ಮಾಡುತ್ತಿದ್ದರು

ಈಗಲೂ ಪ್ರತಿದಿವಸವೂ ತಿರುನಾರಾಯಣಸ್ವಾಮಿಯವರಿಗೂ ಚೆಲುವರಾಯಸ್ವಾಮಿಯವರಿಗೂ ಸರ್ವವಿಧವಾದ ಸೇವೆಗಳನ್ನೂ ತಾವೇ ಮಾಡುತ್ತಿರುವರಾಗಿಯೂ ದೃಢವಾದ ನಂಬಿಕೆಯುಳ್ಳ ಭಕ್ತರುಗಳಿಗೆ ತಮ್ಮ ವಿಚಿತ್ರವಾದ ಶಕ್ತಿಯನ್ನು ಅನುಭವಕ್ಕೆ ಕೊಡುತ್ತಿರುವರಾಗಿಯೂ, ಕಲಿಯ ಮಹಿಮೆಯಿಂದ ನಮ್ಮಲ್ಲಿ ದೋಷಗಳು ಸಂಭವಿಸಿದರೂ ಅದನ್ನು ಪರಿಹರಿಸುತ್ತಲೂ ಬಿಜಯಮಾಡಿಸಿದ್ದಾರೆ. ಇದು ಆ ರಾಮಾನುಜಾಚಾರ್ಯರ ದಿವ್ಯಮಂಗಳ ವಿಗ್ರಹವನ್ನು ದರ್ಶನ ಮಾಡುವುದರಿಂದಲೇ ತಿಳಿಯುತ್ತದೆ. ಆ ವಿಗ್ರಹದಲ್ಲಿ ಹೇಗೆ ದರ್ಶನ ಕೊಡುವರೆಂದರೆ ಭಗವಂತನ ಸರ್ವವಿಧಾನುಭವದಿಂದಲೂ ಉಂಟಾದ ಪರಮಾನಂದದಿಂದ ಪೂರ್ಣರಾಗಿಯೂ, ಅದರ ಪರೀವಾಹರೂಪವಾದ ಮಂದಸ್ಮಿತವುಳ್ಳವರಾಗಿಯೂ, ಅದರಿಂದಲೇ ತೃಣೀಕೃತ ಜಗತ್ತಯರೆಂದು ಹೇಳುವ ಮಹಾಗಾಂಭೀರ್ಯವುಳ್ಳವರಾಗಿಯೂ, ಹಾಗಿದ್ದರೂ ಲೋಕವೆಲ್ಲವೂ ಉಜ್ಜೀವಿಸಬೇಕೆಂಬ ಕೃಪಾಮಾತ್ರ ಪ್ರಸನ್ನಾಚಾರ್ಯತ್ವವನ್ನು ತೋರಿಸುವ ಮುಖಪ್ರಸಾದವುಳ್ಳವರಾಗಿಯೂ, ಜ್ವಲಿಸುವ ಅಗ್ನಿಯಂತೆ ಮಹಾತೇಜಸ್ವಿಗಳಾಗಿಯೂ, ಪರತ್ವ ಸೌಲಭ್ಯಗಳನ್ನು ಪ್ರತ್ಯಕ್ಷದಲ್ಲಿ ದರ್ಶನ ಕೊಡುವರು ಆದುದರಿಂದ ಈಗಲೂ ಈ ಯಾದವಗಿರಿಯಲ್ಲಿ ಶ್ರೀ ರಾಮಾನುಜಾಚಾರ್ಯರು ವಿಭವಾವತಾರದಿಂದಲೇ ಇದ್ದು ಶ್ರೀಮನ್ನಾರಾಯಣನ ನಿತ್ಯ ಕೈಂಕರ್ಯವನ್ನು ನಡೆಸುತ್ತಿರುವರು.



# ಅಮ್ಮನವರಿಗೆ ವಜ್ರಕಿರೀಟ





ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರಿಗೆ 1.75 ಕೋಟಿ ರೂಪಾಯಿಗಳ ವೆಚ್ಚದಲ್ಲಿ ತಯಾರಿಸಲಾದ ವಜ್ರಕಿರೀಟವನ್ನು 1999 ರ ಫೆಬ್ರವರಿ 26 ರಂದು ಮಧ್ಯಾಹ್ನ 1.30 ಗಂಟೆಗೆ ಸಮರ್ಪಿಸಲಾಯಿತು.

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬು ನಾಯುಡು ಅವರು ಕುಟುಂಬ ಸಹಿತರಾಗಿ ತಿರುಚಾನೂರು ಆಲಯದ ಯಾಗಶಾಲೆಯಿಂದ ಸಂಪ್ರದಾಯ ಬದ್ಧರಾಗಿ, ಶಾಸ್ತ್ರೋಕ್ತವಾಗಿ ತಿರುಮಲ ತಿರುಪತಿ ದೇವಸ್ಥಾನದವರು ತಯಾರು ಮಾಡಿದ ವಜ್ರಕಿರೀಟವನ್ನು ಮೊರದಲ್ಲಿಟ್ಟು ಎತ್ತಿಕೊಂಡು ಮೇಳ ತಾಳಗಳಿಂದ ವೇದಮಂತ್ರಗಳಿಂದ ಮೆರವಣಿಗೆಯಲ್ಲಿ ಆಲಯದ ಪ್ರದಕ್ಷಿಣೆ ಬಂದು ಅಮ್ಮನವರ ಸನ್ನಿಧಿಯಲ್ಲಿ ಆಲಯದ ಅರ್ಚಕರ ಕೈಗೆ ತಲುಪಿಸಿದರು. ಮುಖ್ಯಮಂತ್ರಿ ನೀಡಿದ ವಜ್ರಕಿರೀಟವನ್ನು ಪಡೆದ ಅರ್ಚಕರು ಅದನ್ನು ಭಕ್ತಿ ಪ್ರಪತ್ತಿಗಳಿಂದ ವೇದಘೋಷಗಳ ಮಧ್ಯೆ ಶ್ರೀ ಅಲಮೇಲು ಮಂಗಾದೇವಿಗೆ ಅಲಂಕರಿಸಿ ಅರ್ಚನೆ ಮಾಡಿದರು.

ತಿರುಮಲ ತಿರುಪತಿ ದೇವಸ್ಥಾನದ ಧರ್ಮದರ್ಶಿಗಳ ಮಂಡಲಿ ಎರಡು ವರ್ಷದ ಹಿಂದೆ ತೀರ್ಮಾನ ಮಾಡಿದಂತೆ ಶ್ರೀ ಪದ್ಮಾವತೀ ಅಮ್ಮನವರಿಗೆ ವಜ್ರಕಿರೀಟವನ್ನು ತಿ. ತಿ. ದೇವಸ್ಥಾನಗಳ ಆಡಳಿತ ಕಚೇರಿಯ ಆವರಣದಲ್ಲಿ ಮದರಾಸಿಗೆ ಸಂದ ಶ್ರೀ ನಾದೆಳ್ಲ ಆಂಜನೇಯುಲು ಚೆಟ್ಟಿ ಸ್ವರ್ಣಕಾರರು ತಯಾರಿಸಿ ನೀಡಿದರು. 14 ಅಂಗುಲ ಎತ್ತರ ವಿರುವ ಈ ವಜ್ರಕಿರೀಟದಲ್ಲಿ 7.491 ಕಿಲೋಗ್ರಾಂ ಚಿನ್ನ ಬಳಕೆಯಾಗಿದ್ದು, ನಾಲ್ಕು ಸಾವಿರದ ನೂರ ಮೂವತ್ತ ನಾಲ್ಕು ವಜ್ರಗಳನ್ನು ಹುದುಗಿಸಲಾಗಿದೆ. ಜೊತೆಗೇ 202 ಪಚ್ಚೆಗಳೂ, 219 ಕೆಂಪುಗಳೂ ಸೇರಿವೆ. ಈ ವಜ್ರಕಿರೀಟ ನಿರ್ಮಾಣದಲ್ಲಿ ಬಳಸಲಾದ ಬಂಗಾರ ವಜ್ರಗಳೆಲ್ಲವೂ ಸ್ವಾಮಿ ಸೇವೆಯಲ್ಲಿ ಭಕ್ತರು ಹುಂಡಿಯಲ್ಲಿ ಸಮರ್ಪಿಸಿದ ಕಾಣಿಕೆಗಳೇ ಆಗಿವೆ. 219 ಕೆಂಪುಗಳನ್ನೂ 202 ಪಚ್ಚೆಗಳನ್ನೂ ಕಿರೀಟ ತಯಾರಕರಾದ ರತ್ನಪಡಿ ವ್ಯಾಪಾರಿ ಶ್ರೀ ನಾದೆಳ್ಲ ಆಂಜನೇಯುಲು ಚೆಟ್ಟಿಯವರು ತಮ್ಮ ಕಾಣಿಕೆಯಾಗಿ ನೀಡಿದ್ದಾರೆ.

ಕಿರೀಟದ ಅಂತಿಮ ಮಾದರಿಯನ್ನು ತಿ.ತಿ ದೇ ಧರ್ಮಕರ್ತರ ಮಂಡಲಿ ಮೇ 1998 ರಲ್ಲಿ ಅಂಗೀಕರಿಸಿತು. ಅನಂತರ ಚಿನ್ನವನ್ನು 22-6-1998 ರಲ್ಲಿ ತಯಾರಿಗಾಗಿ ನೀಡಲಾಯಿತು. ಚಿನ್ನದ ಒಳಚಿಪ್ಪಿನ ಟರ್ನಿಂಗ್, ತ್ರೆಡಿಂಗ್ ಕೆಲಸಗಳನ್ನು ತಿ.ತಿ.ದೇ ವಾಹನ ವಿಭಾಗದ ಕಾರ್ಯಾಗಾರದಲ್ಲಿ ಅತಿಕಡಿಮೆ ವೇಸ್ಟೇಜ್ ಆಗುವಂತೆ ಬಹು ಜಾಗ್ರತೆಯಿಂದ ಕೈಗೊಳಿಸಲಾಯಿತು. 98 ರ ಅಕ್ಟೋಬರ್ ಮೊದಲವಾ

ರದಲ್ಲಿ ವಜ್ರಗಳನ್ನು ಹುದುಗಿಸುವ ಕೆಲಸವನ್ನು ಕೈಗೆತ್ತಿಕೊಳ್ಳಲಾಯಿತು. ಇಡೀ ಕೆಲಸವನ್ನು ತಿ.ತಿ.ದೇ. ಆಡಳಿತ ಕಚೇರಿಯಲ್ಲಿ ವಿಶೇಷ ನಿಘಾ ಪಡೆಯ ಕಟ್ಟೆಚ್ಚರದಲ್ಲಿ ನಡೆಸಲಾಯಿತು. ಒಬ್ಬ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ ಅವರ ಮೇಲು ವಿಚಾರಣೆಯಿದ್ದಿತು ಧರ್ಮಕರ್ತರ ಮಂಡಲಿಯ ಸದಸ್ಯರ ಒಂದು ಉಪಸಮಿತಿಯೂ ಕೆಲಸವನ್ನು ನಡೆಯುತ್ತಿದ್ದಂತೆ ಗಮನಿಸುತ್ತ ಸಲಹೆ ಸೂಚನೆ ನೀಡಿತು

ಫೆಬ್ರವರಿ 17 ರಂದು ಕೆಲಸವನ್ನು ಮುಗಿಸಿ ತಯಾರಕರು ವಜ್ರಕಿರೀಟವನ್ನು ತಿ ತಿ. ದೇವಸ್ಥಾನಗಳಿಗೆ ಒಪ್ಪಿಸಿದರು ಅದನ್ನು ಪುನಃ ಕ್ವಾಲಿಟಿ ಕಂಟ್ರೋಲ್‌ನ ಪರೀಕ್ಷೆಗೆ ಒಳಪಡಿಸಿ ಒಪ್ಪಲಾಯಿತು.

ವಜ್ರಕಿರೀಟವನ್ನು ಎಲ್ಲರೂ ನೋಡಲು ಅನುಕೂಲವಾಗುವಂತೆ ಫೆಬ್ರವರಿ 25 ರಂದು ಗುರುವಾರ ಮದ್ಯಾಹ್ನ ತಿರುಪತಿಯ ಪುರವೀಧಿಗಳಲ್ಲಿ ಮೆರವಣಿಗೆ ಮಾಡಲಾಯಿತು ಎಲ್ಲರಿಗೂ ಕಾಣುವಂತೆ ಎತ್ತರದ ಗಾಜಿನ ಪೆಟ್ಟಿಗೆಯಲ್ಲಿ ಇಟ್ಟು ಛತ್ರ ಚಾಮರಗಳೊಡನೆ, ಮೇಳ ತಾಳಗಳೊಡನೆ, ಮಂಗಳ ವಾದ್ಯಗಳ ವೇದ ಘೋಷದ ನಡುವೆ ತಿರುಪತಿಯ ತಿ ತಿ ದೇ ಭವನದಿಂದ ವಿ ವಿ. ಮಹಲ್, ಮಹಾವೀರ್ ಟಾಕೀಸು ಬೀದಿ, ತೇರು ಬೀದಿ, ರೈಲ್ವೆ ನಿಲ್ದಾಣ, ಗಾಂಧಿ ವೃತ್ತ, ಅಂಬೇಡ್ಕರ್ ವೃತ್ತ, ರೈಲ್ವೆ ಮೇಲು ಸೇತುವೆಗಳ ಮೂಲಕ ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯದತ್ತ ಕಿರೀಟವನ್ನು ತೆಗೆದುಕೊಂಡು ಬರಲಾಯಿತು. ಬಲವಾದ ಬಂದೋಬಸ್ತಿನಿಂದ ಕೂಡಿದ ಈ ಮೆರವಣಿಗೆಯಲ್ಲಿ ತಿ ತಿ ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ ಸುಬ್ಬಾರಾವ್ವು, ಜೆ.ಇ.ಓ. ಶ್ರೀ ರಾಮಕೃಷ್ಣಯ್ಯ, ಮುಖ್ಯ ರಕ್ಷಣಾಧಿಕಾರಿ ಶ್ರೀ ವಿಜಯಕುಮಾರ್, ಅರಣ್ಯಾಧಿಕಾರಿ ಶ್ರೀ ವೆಂಟ್ರಾಮಯ್ಯ, ಆರ್ಥಿಕ ಸಲಹಾದಾರ ಶ್ರೀ ಬಾಲಸುಬ್ರಹ್ಮಣ್ಯಂ, ಡೆ.ಇ.ಓ. ಶ್ರೀ ಲಕ್ಷ್ಮೀಪತಿ ಮೊದಲಾದವರು ಭಾಗವಹಿಸಿದ್ದರು. ಸಂಜೆ ಆರುಗಂಟೆಯ ಹೊತ್ತಿಗೆ ತಿರುಚಾನೂರು ಸೇರಿದ ಕಿರೀಟವನ್ನು ಸಾಂಪ್ರದಾಯಿಕ ಶಿಸ್ತು ಸಂಭ್ರಮಗಳೊಡನೆ ಸ್ವಾಗತಿಸಲಾಯಿತು. ನಗರ ಪ್ರದಕ್ಷಿಣೆಯ ನಂತರ ಆಲಯ ದೊಳಕ್ಕೆ ತೆಗೆದು ಕೊಂಡು ಹೋದ ನಂತರ ಆ ರಾತ್ರಿಗಾಗಿ ಸುರಕ್ಷಿತಗೊಳಿಸಲಾಯಿತು.

ಮಾರನೆಯ ದಿನ ಶಾಸ್ತ್ರೋಕ್ತವಾಗಿ ಪೂಜೆ/ಪುನಸ್ಕಾರಗಳಾದ ಮೇಲೆ ಆಂಧ್ರಪ್ರದೇಶದ ಮುಖ್ಯಮಂತ್ರಿಯವರು ಭಕ್ತಿ ಭಾವದಿಂದ ವಿನೀತರಾಗಿ, ಪ್ರಜೆಗಳ ಪರವಾಗಿ ಶ್ರೀ ಪದ್ಮಾವತೀ ಅಮ್ಮನವರಿಗೆ ಕಿರೀಟವನ್ನು ಸಮರ್ಪಿಸಿದರು.

* * *







ವಜ್ರಕಿರೀಟ ನಿರ್ಮಾಣದ ವಿವಿಧ ಹಂತಗಳಲ್ಲಿ ಪರಿಶೀಲನೆ.

# ವಾರ್ತಾಲಹರಿ

## ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು

ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ 1999 ರ ಫೆಬ್ರವರಿ 6 ರಿಂದ 15 ರ ವರೆಗೆ ಹತ್ತು ದಿನಗಳ ಕಾಲ ವಾರ್ಷಿಕ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ನಡೆದವು.

ಮೊದಲನೆಯ ದಿನ ಫೆಬ್ರವರಿ 6 ನೇ ತಾರೀಖು ವಿಷ್ವಕ್ಸೇನರ ಮೆರವಣಿಗೆಯಾಗಿ, ಅಂಕುರಾರ್ಪಣೆಯಾಯಿತು ಫೆಬ್ರವರಿ 7 ರಂದು ಬೆಳಗ್ಗೆ ಆಲಯದ ಬಾವುಟದ ಬತೇರಿಯ ಮೇಲೆ ಗರುಡ ಧ್ವಜವನ್ನು ಹಾರಿಸಲಾಯಿತು. ಅಂದು ಸಂಜೆ ಶ್ರೀ ಪದ್ಮಾವತೀ ಸಹಿತ ಶ್ರೀ ವೆಂಕಟೇಶ್ವರಸ್ವಾಮಿಗೆ ದೊಡ್ಡ ಶೇಷವಾಹನೋತ್ಸವ ಯಶಸ್ವಿಯಾಗಿ ನಡೆಯಿತು. 8 ರಂದು ಬೆಳಗ್ಗೆ ಚಿಕ್ಕ ಶೇಷವಾಹನದಲ್ಲಿಯೂ, ಅಂದು ಸಂಜೆ ಹಂಸವಾಹನದಲ್ಲಿಯೂ ಸ್ವಾಮಿ ಊರ ಮೆರವಣಿಗೆಯಲ್ಲಿ ಬಂದರು. 9 ರಂದು ಬೆಳಗ್ಗೆ ಸಿಂಹವಾಹನವೂ ಸಂಜೆ ಮುತ್ತಿನ ಚಪ್ಪರವಾಹನವೂ ಸ್ವಾಮಿಯನ್ನು ಊರ ಜನರ ಮಧ್ಯಕ್ಕೆ ಊರ ಜನದ ಹೃದಯಕ್ಕೆ ಕರೆದು ತಂದವು. 10 ರಂದು ಕಲ್ಪವೃಕ್ಷವಾಹನ ಸರ್ವಭೂಪಾಲವಾಹನೋತ್ಸವಗಳು ನಡೆದವು. 11 ರಂದು ಮೋಹಿನೀ ಅವತಾರ ರಂಜಿಸಿತು

ಅಂದು ಸಂಜೆ ನಡೆದ ಬಂಗಾರದ ಗರುಡೋತ್ಸವವನ್ನು ಸಾವಿರಾರು ಮಂದಿ ಭಕ್ತರು ಉತ್ಸಾಹ ಭಕ್ತಿ ಗೌರವಗಳ ನಡುವೆ ಗೋವಿಂದ ನಾಮ ಘೋಷ ಮಾಡುತ್ತ ನೋಡಿದರು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದ ಶ್ರೀ ಗೋದಾದೇವಿ ಆಲಯದಿಂದ ಮುಡಿದು ನೀಡಿದ ತುಲಸೀ ಮಾಲೆಯನ್ನು ಉತ್ಸಾಹ ಸಂಭ್ರಮಗಳಿಂದ ಮೆರವಣಿಗೆಯಲ್ಲಿ ತಂದು ಸ್ವಾಮಿಗೆ ಒಪ್ಪಿಸಲಾಯಿತು ರೇಷ್ಮೆವಸ್ತ್ರಗಳನ್ನೂ ತಂದು ಒಪ್ಪಿಸಲಾಯಿತು

12 ರಂದು ಬೆಳಗ್ಗೆ ಹನುಮಂತನು ಸ್ವಾಮಿಗೆ ವಾಹನವಾಗಿ ಮೆರವಣಿಗೆಯಲ್ಲಿ ಸ್ವಾಮಿಯನ್ನು ಕರೆತಂದರೆ ಅಂದು ರಾತ್ರಿ ಗಜೇಂದ್ರನು ಸ್ವಾಮಿಯನ್ನು ಭಕ್ತರ ಮಧ್ಯೆ ಸ್ಥಾಪಿಸಿದ ಹಿರಿಮೆಯನ್ನು ಪಡೆದನು. 13 ರಂದು ಸೂರ್ಯಪ್ರಭ ಚಂದ್ರಪ್ರಭ ವಾಹನಗಳು ನಡೆದವು.

14 ರಂದು ಬೆಳಗ್ಗೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಯ ರಥೋತ್ಸವ ಚಂದ್ರಗಿರಿಯಿಂದಲೂ, ತಿರುಪತಿಯಿಂದಲೂ ಭಾಕರಾಪೇಟೆಯ ಕಡೆಯಿಂದಲೂ ಶ್ರೀನಿವಾಸ ಮಂಗಾಪುರವನ್ನು ಭಕ್ತರು ಮುತ್ತಿಗೆ ಹಾಕಿದರೋ ಎಂಬಂತೆ ಜನಸಾಗರ. ಅಲಂಕರಿಸಿದ ರಥದಲ್ಲಿ ಪಾರ್ಥಸಾರಥಿ ರಥಿಯಾಗಿ ಹೊರಬಂದರೆ ಮುಗ್ಧರಾಗಿ ಭಕ್ತರು ಆನಂದದಿಂದ ಸ್ವಾಗತಿಸಿದರು ಅಂದು ಸಂಜೆ ಸ್ವಾಮಿ ಕಲ್ಕಿಯಂತೆ ಕುದುರೆಯೇರಿ ಬಂದನು.

15 ರಂದು ಬೆಳಗ್ಗೆ ಚಕ್ರಸ್ನಾನವಾಯಿತು. ಅವಭೃಥ ದೊಡನೆ ಮುಗಿದ ಬ್ರಹ್ಮೋತ್ಸವದಲ್ಲಿ ಸಂಜೆಯ ಕಾರ್ಯಕ್ರಮವಾಗಿ ಧ್ವಜಾವರೋಹಣ ನಡೆಯಿತು

ಬ್ರಹ್ಮೋತ್ಸವಗಳ ಸಮಯದಲ್ಲಿ ಆಲಯದ ಆವರಣವನ್ನೂ ರಥಬೀದಿಯನ್ನೂ ಹೆಚ್ಚು ಕಡಿಮೆ ಇಡೀ ಶ್ರೀನಿವಾಸ ಮಂಗಾಪುರವನ್ನೂ ತಳಿರು ತೋರಣಗಳಿಂದ ಬಣ್ಣಬಣ್ಣದ ದೀಪಗಳಿಂದ ಅಲಂಕಾರ ಮಾಡಲಾಗಿದ್ದಿತು ಪ್ರತಿದಿನವೂ ಸಂಜೆ ವಿಶಾಲವಾದ ಬಯಲಿನಲ್ಲಿ ಸ್ವಾಮಿಯ ಊಂಜಲ್‌ಸೇವೆ ನಡೆಯಿತು ತಿ ತಿ ದೇ ಗಳ ಧರ್ಮಪ್ರಚಾರ ಪರಿಷತ್‌ನ ವತಿಯಿಂದ ಹರಿಕಥೆ, ಗೀತೋಪದೇಶ ಉಪನ್ಯಾಸ, ಸಂಗೀತ ಕಚೇರಿ - ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ತಿ.ತಿ. ದೇ ಪ್ರಕಾಶನ ವಿಭಾಗದಿಂದ ಧಾರ್ಮಿಕ ಗ್ರಂಥ ಪ್ರದರ್ಶನ ವಿಕ್ರಯಶಾಲೆಯೂ ತೆರೆದಿದ್ದು ಅಪಾರವಾದ ಜನ ಭಕ್ತಿ ಸಾಹಿತ್ಯವನ್ನು ಕೊಂಡುಕೊಂಡರು.



## ಧರ್ಮಕರ್ತರ ಮಂಡಲಿಯ ತೀರ್ಮಾನಗಳು

ಕಂಪ್ಯೂಟರ್ ಕಾರ್ಡ್‌ಗಳ ಮೂಲಕ ವೈಕುಂಠಂ ಕ್ಯೂ ಕಾಂಪ್ಲೆಕ್ಸ್‌ನಲ್ಲಿ ಗಂಟೆಗಟ್ಟಲೆ ಸ್ವಾಮಿ ದರ್ಶನಕ್ಕೆ ಕಾಯುವಿಕೆಯನ್ನು ತಪ್ಪಿಸಿ, ಒಂದು ಗಂಟೆಯಲ್ಲಿ ದರ್ಶನಾವಕಾಶ ಕಲ್ಪಿಸಲು ಯೋಜಿಸಿ, ಪ್ರಯೋಗಾತ್ಮಕವಾಗಿ ಈ ವಿಧಾನವನ್ನು ಪ್ರವೇಶಗೊಳಿಸಿ ನೋಡಬೇಕೆಂದು ತಿ.ತಿ.ದೇ. ಧರ್ಮಕರ್ತರ ಮಂಡಲಿ ತೀರ್ಮಾನಿಸಿದೆ.

ಫೆಬ್ರವರಿ ತಿಂಗಳ ಕೊನೆಯಲ್ಲಿ ತಿರುಮಲೆಯಲ್ಲಿ ಸಮಾವೇಶಗೊಂಡ ಧರ್ಮಕರ್ತರ ಮಂಡಲಿಯ ತೀರ್ಮಾನಗಳನ್ನು ಪತ್ರಿಕಾ ಸಮಾವೇಶದಲ್ಲಿ ತಿಳಿಸುತ್ತ ಆಂಧ್ರಪ್ರದೇಶದ ದೇವಾದಾಯ ಇಲಾಖಾ ಕಮಿಷನರ್ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಈ ಬಗ್ಗೆ ತಿಳಿಸಿದರು.

ದೀಕ್ಷಾಕಂಕಣವೆಂಬ ಈ ಕಂಪ್ಯೂಟರ್ ಕಾರ್ಡ್‌ನಲ್ಲಿ ಭಕ್ತರ ಹೆಸರು ಅವರು ದರ್ಶನ ಪಡೆಯುವ ಕಾಲ ಮೊದಲಾದುವನ್ನು ಗುರುತಿಸಲಾಗಿರುತ್ತದೆ. ಇದರ ನೆರವಿನಿಂದ ಸರತಿಯ ಸಾಲನ್ನು ಪ್ರವೇಶಿಸಿದ ಒಂದು ಗಂಟೆಯಲ್ಲಿ ದರ್ಶನ ಪಡೆಯಬಹುದು. ತಿರುಮಲೆಯ ಆಯಕಟ್ಟಿನ ಸ್ಥಳಗಳಲ್ಲಿ ಆಯಾ ಕ್ಷಣದಲ್ಲಿ ಯಾವ ನಂಬರಿನ ಕಾರ್ಡಿನವರು ದರ್ಶನ ಪಡೆಯುತ್ತಿರುವರೆಂಬ ವಿವರ ತಿಳಿಸುವ ಬೋರ್ಡ್‌ಗಳು ವ್ಯವಸ್ಥೆಯಾಗುವುದೆಂದು ತಿಳಿಸಿದರು

ತಿರುಮಲೆಯ ಸ್ವಾಮಿ ವೈಭವೋತ್ಸವ ಮಂಟಪದಲ್ಲಿ ಸ್ವಾಮಿಯ ಕಲ್ಯಾಣೋತ್ಸವವನ್ನು ನಡೆಸಬಹುದೆಂದು ತೀರ್ಮಾನಿಸಲಾಯಿತು. ವೈಭವೋತ್ಸವ ಮಂಟಪದಲ್ಲಿ ಸ್ವಾಮಿ ಕಲ್ಯಾಣೋತ್ಸವವನ್ನು ನಡೆಸುವುದರಲ್ಲಿ ಅಭ್ಯಂತರವಿರದು ಎಂದು ಆಗಮ ಶಾಸ್ತ್ರ ಸಲಹಾ ಸಮಿತಿಯ ನಾಲ್ಕು ಮಂದಿ ಸದಸ್ಯರು ಅಂಗೀಕರಿಸಿದ್ದು ಒಬ್ಬರು ಮಾತ್ರ ಆಕ್ಷೇಪಣೆ ಸೂಚಿಸಿದ್ದರಿಂದ ಈ ತೀರ್ಮಾನ ತೆಗೆದುಕೊಳ್ಳಲಾಯಿತೆಂದು ತಿಳಿಸಲಾಗಿದೆ. ಪ್ರಸ್ತುತ ಕಲ್ಯಾಣೋತ್ಸವ ನಡೆಸುವ ಸ್ಥಳದಲ್ಲಿ ಹೆಚ್ಚಿನ ಪೋಟು - ಅಡುಗೆಶಾಲೆಯನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

ಸ್ವಾಮಿಯ ಬ್ರಹ್ಮೋತ್ಸವದಲ್ಲಿ ಬಳಸುವ ಹಂಸ, ಗಜ, ಗರುಡವಾಹನಗಳಲ್ಲಿ ಹಲವನ್ನು ಜೀರ್ಣೋದ್ಧಾರಗೊಳಿಸಬೇಕೆಂದೂ, ಹಲವನ್ನು ಹೊಸದಾಗಿ ಮಾಡಿಸಬೇಕೆಂದೂ ತೀರ್ಮಾನಿಸಲಾಯಿತು. ಹಳೆಯ ವಾಹನಗಳನ್ನು ತಿ. ತಿ. ದೇವಸ್ಥಾನಗಳ ಇತರ ಆಲಯಗಳಲ್ಲಿ ಬಳಕೆಗೆ ನೀಡಬೇಕೆಂದು ತೀರ್ಮಾನಿಸಲಾಯಿತು.

ಕರ್ನಾಟಕ ಚಾರಿಟೀಸ್ ಸ್ಥಳವನ್ನು ಐವತ್ತು ವರ್ಷ ಕರ್ನಾಟಕ ಸರ್ಕಾರಕ್ಕೆ ಲೀಸ್ ಆಧಾರದ ಮೇಲೆ ನೀಡಲು ತೀರ್ಮಾನಿಸಲಾಯಿತು.

ತಿರುಮಲೆಯಲ್ಲಿನ ನಿತ್ಯಾನ್ನ ದಾನಯೋಜನೆಯನ್ನು ಮತ್ತಷ್ಟು ಮೆರುಗುಗೊಳಿಸಲು ತೀರ್ಮಾನಿಸಲಾಯಿತು.

ತಿರುಪತಿ, ಭೀಮವರಂ, ವರಂಗಲ್ ಗಳ ಮೂಗ ಬಧಿರ ಪಾಠಶಾಲೆಗಳ ವಿದ್ಯಾರ್ಥಿಗಳಿಗಾಗಿ ವಿವಿಧ ಪರಿಕರಗಳನ್ನು ಕೊಳ್ಳಲು ಏಳುಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

ಓರಿಯಂಟಲ್ ಕಾಲೇಜಿನಲ್ಲಿ ಶಿಕ್ಷಣ ಪಡೆಯುವ ಮಹಿಳಾ ವಿದ್ಯಾರ್ಥಿಗಳಲ್ಲಿ 25 ಮಂದಿಗೆ ತಿಂಗಳಿಗೆ 500 ರೂಪಾಯಿಗಳ ವಿದ್ಯಾರ್ಥಿ ವೇತನ ನೀಡಲು ತೀರ್ಮಾನಿಸಲಾಯಿತು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಪ್ರಸಾದ ಯೋಜನೆಯನ್ನು ಪ್ರವೇಶಗೊಳಿಸಲು ತೀರ್ಮಾನಿಸಲಾಯಿತು. 50 ಸಾವಿರ ರೂಪಾಯಿಗಳನ್ನು ದಾನ ನೀಡುವವರ ಹೆಸರನ್ನು ಆಲಯದಲ್ಲಿ ಪ್ರಕಟಿಸಲಾಗುವುದೆಂದು ತಿಳಿಸಲಾಗಿದೆ.

ತಿರುಪತಿಯ ಕೇಂದ್ರ ಗ್ರಂಥಾಲಯವನ್ನು ಅಭಿವೃದ್ಧಿಗೊಳಿಸಲು ತೀರ್ಮಾನಿಸಲಾಯಿತು.

## ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವಗಳು

ತಿರುಪತಿಯ ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯದಲ್ಲಿ ವಾರ್ಷಿಕ ಬ್ರಹ್ಮೋತ್ಸವಗಳು ಫೆಬ್ರವರಿ 12 ರಿಂದ ಫೆಬ್ರವರಿ 17 ರ ವರೆಗೆ ವೈಭವದಿಂದ ನಡೆದವು. ತತ್ಸಂದರ್ಭದಲ್ಲಿ ಫೆಬ್ರವರಿ 12 ರಂದು ಸಂಜೆ ಶ್ರೀ ವಿನಾಯಕಸ್ವಾಮಿ ಮೆರವಣಿಗೆ ಯಶಸ್ವಿಯಾಗಿ ನಡೆದ ನಂತರ ಬ್ರಹ್ಮೋತ್ಸವ ಅಂಕುರಾರ್ಪಣೆ ಆಯಿತು

ಫೆಬ್ರವರಿ 13 ರಂದು ಶನಿವಾರ ಬೆಳಗ್ಗೆ ವೇದಘೋಷ ನಡೆಯುತ್ತಿದ್ದಂತೆ ಕಪಿಲೇಶ್ವರಸ್ವಾಮಿ ದೇವಾಲಯದ ಧ್ವಜಸ್ತಂಭದ ಮೇಲೆ ನಂದಿ ಧ್ವಜವನ್ನು ಹಾರಿಸಲಾಯಿತು. ನಂತರ ಶ್ರೀ ಕಾಮಾಕ್ಷಿಸಮೇತ ಕಪಿಲೇಶ್ವರಸ್ವಾಮಿಯವರ ಮೆರವಣಿಗೆ ಚಂದ್ರಪ್ರಭವಾಹನದಲ್ಲಿ ನಡೆಯಿತು. ನಂತರದ ದಿನ ಶಿವರಾತ್ರಿಯ ಶುಭದಿನ ಅಂದು ಸ್ವಾಮಿ ನಂದಿ ವಾಹನವನ್ನೇರಿ ಭಕ್ತರ ಹೃದಯವನ್ನು ಹೊಕ್ಕನು ಹದಿನೈದನೆಯ ತಾರೀಖಿನಂದು ಗಜವಾಹನದಲ್ಲಿಯೂ, 16 ನೇ ತಾರೀಖಿನಂದು ಶೇಷವಾಹನದಲ್ಲಿಯೂ 17 ನೇ ತಾರೀಖಿನಂದು ರಾವಣವಾಹನದಲ್ಲಿಯೂ ಪರಶಿವನ ಮೆರವಣಿಗೆ ಯಶಸ್ವಿಯಾಗಿ ನಡೆಯಿತು.

15 ನೇ ತಾರೀಖು ಸಂಜೆ ಆಲಯ ಪ್ರಾಂಗಣದಲ್ಲಿ ಶ್ರೀ ಕಾಮಾಕ್ಷೀ ಕಪಿಲೇಶ್ವರಸ್ವಾಮಿಗಳ ಕಲ್ಯಾಣೋತ್ಸವ ಯಶಸ್ವಿಯಾಗಿ ಭಕ್ತರ ಕಣ್ಣಹಬ್ಬವಾಗಿ ನಡೆಯಿತು



ಪ್ರತಿ ದಿನವೂ ಸಂಜೆ ಊಂಜಲ್ ಸೇವೆಯು ಭಕ್ತಾನಂದದಾಯಕವಾಗಿ ನಡೆಯಿತು. ಬ್ರಹ್ಮೋತ್ಸವ ಸಂದರ್ಭದಲ್ಲಿ ಕಪಿಲತೀರ್ಥದ ಸುತ್ತಮುತ್ತಲ ಪ್ರದೇಶವನ್ನು ತಳಿರು ತೋರಣ, ಪುಷ್ಪ ಪ್ರತಿಮಾ ಚಿತ್ರಣ, ವಿದ್ಯುತ್ ಚಿತ್ತಾರ ಕಾಂತಿಯಿಂದ ಅಲಂಕರಿಸಲಾಗಿದ್ದಿತು.

## 1999 - 2000
## ವಾರ್ಷಿಕ ಆಯವ್ಯಯ ಪತ್ರ

ಫೆಬ್ರವರಿ ಕೊನೆಯಲ್ಲಿ ನಡೆದ ತಿ.ತಿ ದೇ ಧರ್ಮಕರ್ತರ ಮಂಡಲಿಯ ಸಭೆಯಲ್ಲಿ 1999 - 2000 ವರ್ಷದ ಮುಂಗಡ ಆಯವ್ಯಯ ಪತ್ರವನ್ನು ಅನುಮೋದಿಸಲಾಯಿತು. ಅದರಂತೆ 1999 - 2000 ದಲ್ಲಿ ತಿ. ತಿ. ದೇ.ಗಳ ಒಟ್ಟು ಆದಾಯ 340 ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ ಇದರಲ್ಲಿ ಆಯ ಭಾಗದಲ್ಲಿ ಹುಂಡಿಯ ಮೂಲಕ 142.94 ಕೋಟಿ, ಆರ್ಜಿತ ಸೇವೆಗಳಿಂದ 36 36 ಕೋಟಿ, ಪ್ರತ್ಯೇಕ ಪ್ರವೇಶದಿಂದ 18.5 ಕೋಟಿ, ಠೇವಣಿಗಳ ಮೇಲಿನ ಬಡ್ಡಿಯಿಂದ 62.96 ಕೋಟಿ ರೂಪಾಯಿಗಳೂ, ಪ್ರಸಾದಗಳ ಮಾರಾಟದಿಂದ 19.25 ಕೋಟಿ ರೂಗಳೂ ಉಂಟಾಗುವುದೆಂದು ಅಂದಾಜಿಸಲಾಗಿದೆ ವ್ಯಯ ಭಾಗದಲ್ಲಿ ಸತ್ರಗಳು, ಕಾಟೇಜುಗಳ ನಿರ್ಮಾಣ ವೆಚ್ಚಕ್ಕೆ 61 09 ಕೋಟಿ ರೂಪಾಯಿಗಳು, ಸಿಬ್ಬಂದಿಯ ಸಂಬಳ ಸಾರಿಗೆಗಳು - 73 62 ಕೋಟಿ ರೂಪಾಯಿಗಳು. ವಂತಿಗೆಗಳು ಗ್ರಾಂಟ್‌ಗಳು 38.23 ಕೋಟಿ ರೂಪಾಯಿಗಳು, ವಿದ್ಯಾಸಂಸ್ಥೆಗಳಿಗಾಗಿ 20.85 ಕೋಟಿ ರೂಪಾಯಿಗಳೂ, ಇತರ ಖರ್ಚುಗಳು 30.38 ಕೋಟಿ ರೂಪಾಯಿಗಳೆಂದು ಅಂದಾಜಿಸಲಾಗಿದೆ.

1936 ರಲ್ಲಿ 15 ಲಕ್ಷ ರೂಪಾಯಿಗಳ ಆಯವ್ಯಯ ಪತ್ರ ಈ ಶತಮಾನದಂತ್ಯಕ್ಕೆ 340 ಕೋಟಿ ರೂಪಾಯಿಗಳನ್ನು ತಲುಪಿಸಿರುವುದು ಗಮನಾರ್ಹ ಈ ಬಾರಿಯ ಆಯವ್ಯಯದಲ್ಲಿ ತಿರುಮಲೆಯ ಸ್ವಾಮಿಯ ವಾಹನಗಳ ಮರಮತ್ತು ಕೆಲಸಗಳು ಸೇರಿವೆ ಅತಿ ಹೆಚ್ಚಿನ ಕಾಮಗಾರಿ ಕೆಲಸಗಳನ್ನು ತೀರ್ಮಾನಿಸಲಾಗಿದೆ - ಎಂದು ಆಯವ್ಯಯ ಪತ್ರದ ವಿವರಗಳನ್ನು ಪತ್ರಕರ್ತರಿಗೆ ತಿಳಿಸಿದ, ಆಂಧ್ರ ಪ್ರದೇಶದ ದೇವಾದಾಯ ಇಲಾಖಾ ಕಮಿಷನರ್ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಹೇಳಿದರು.

## ಸ್ವಾಮಿಗೆ ನೂರು ಫ್ಯಾನ್

ಕಲ್ಕತ್ತೆಗೆ ಸೇರಿದ ಎಚ್. ಎಂ. ಸಿ ಪೋದ್ದಾರ್ ಕಂಪನಿಯವರು ಈಚೆಗೆ ತಿರುಮಲೆಯಪ್ಪನಿಗೆ



## ಸ್ವಾಮಿ ಸೇವೆಯಲ್ಲಿ ಭಾರತದ ಗೃಹಮಂತ್ರಿ

ಭಾರತದ ಗೃಹಮಂತ್ರಿ ಶ್ರೀ ಲಾಲ್ ಕೃಷ್ಣ ಅಧ್ವಾನಿ ಅವರು ಫೆಬ್ರವರಿ 5 ರಂದು ತಿರುಮಲೇಶನ ಸಂದರ್ಶನ ಪಡೆದು ಆರಾಧನೆ ನಡೆಸಿದರು.

ರೇಣಿಗುಂಟ ವಿಮಾನಾಶ್ರಯದಿಂದ ತಿರುಮಲೆಯನ್ನು ಸೇರಿದ ಗೃಹಮಂತ್ರಿಗಳು ತಿರುಮಲೆಯ ಶ್ರೀ ಪದ್ಮಾವತೀ ಅತಿಥಿಗೃಹವನ್ನು ತಲುಪಿ ನಂತರ ರಾತ್ರಿ 7.30 ರ ಹೊತ್ತಿನಲ್ಲಿ ಆಲಯವನ್ನು ಸೇರಿ ಸ್ವಾಮಿಯನ್ನು ಸಂದರ್ಶಿಸಿದರು. ಸಾಂಪ್ರದಾಯಿಕ ರೀತಿಯಲ್ಲಿ ಅವರನ್ನು ಸ್ವಾಗತಿಸಲಾಯಿತು. ಶ್ರೀ ಎಲ್. ಕೆ. ಅಧ್ವಾನಿ ಅವರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನ ನೀಡಲಾಯಿತು. ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬಾರಾವು ಅವರು ಶ್ರೀಯುತರಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು

ಗೃಹಮಂತ್ರಿಗಳೊಡನೆ ಸ್ವಾಮಿಯನ್ನು ಸಂದರ್ಶಿಸಿದವರಲ್ಲಿ ಭಾರತದ ವಿಮಾನಯಾನ ಶಾಖಾ ಸಚಿವ ಶ್ರೀ ಅನಂತಕುಮಾರ್ ಅವರೂ, ಭಾರತೀಯ ಜನತಾ ಪಕ್ಷದ ಪ್ರಧಾನ ಕಾರ್ಯದರ್ಶಿ ಶ್ರೀ ವೆಂಕಯ್ಯನಾಯುಡು ಅವರೂ ಸೇರಿದ್ದರು



ನೂರು ವಿದ್ಯುತ್ ಚಾಲಿತ ಪಂಖಗಳನ್ನು ನೀಡಿದ್ದಾರೆ ಸುಮಾರು 14 ಲಕ್ಷ ರೂಪಾಯಿ ಬೆಲೆಯ ಈ ಪಂಖಗಳನ್ನು ಎಚ್. ಎಂ. ಸಿ. ಸಂಸ್ಥೆಯ ಪೌರ ಸಂಬಂಧಾಧಿಕಾರಿ ಶ್ರೀ ಬಿ. ದೇವನಾಥ ರೆಡ್ಡಿಯವರು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ ಸುಬ್ಬಾರಾವ್ ಅವರಿಗೆ ನೀಡಿದರು.

## ತಿರುಮಲೆಯಲ್ಲಿ ಮುಖ್ಯಮಂತ್ರಿ

ಫೆಬ್ರವರಿ 26 ರಂದು ಮಧ್ಯಾಹ್ನ ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರಿಗೆ ಬಂಗಾರದ ಕಿರೀಟವನ್ನು ಜನತೆಯ ಪರವಾಗಿ ಅರ್ಪಿಸಿದ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ಕುಟುಂಬ ಸಹಿತರಾಗಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ಆಲಯವನ್ನು ಪ್ರವೇಶಿಸಿದ ಮುಖ್ಯಮಂತ್ರಿಯವರಿಗೆ



ಆಲಯ ಮಹಾದ್ವಾರದಲ್ಲಿ ಸಂಪ್ರದಾಯದಂತೆ ಇಸ್ತಿಕಪಾಲ ಸ್ವಾಗತ ನೀಡಲಾಯಿತು ಸ್ವಾಮಿಯನ್ನು ಸಂದರ್ಶಿಸಿದ ನಂತರ ಅವರಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಚನ ನೀಡಲಾಯಿತು ಕಾರ್ಯನಿರ್ವರಹಣಾಧಿಕಾರಿ ಡಾ|| ಐ ವಿ. ಸುಬ್ಬಾರಾವು ಅವರು ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು. ಮುಖ್ಯಮಂತ್ರಿಗಳೊಡನೆ ಆಂಧ್ರಪ್ರದೇಶದ ಮಂತ್ರಿಗಳೂ, ತಿ.ತಿ ದೇ ಧರ್ಮಕರ್ತರಮಂಡಳಿಯ ಸದಸ್ಯರೂ, ಪ್ರಮುಖರೂ ಇದ್ದರು.

## ತಿರುಚಾನೂರಿನಲ್ಲಿ ಎಸ್. ವಿ. ಆಸ್ಥಾನ ಮಂಟಪ

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದ ದಕ್ಷಿಣದ ತೇರುಬೀದಿಯಲ್ಲಿ ತಿ. ತಿ. ದೇವಸ್ಥಾನದ ನೂತನ ಆಸ್ಥಾನ ಮಂಟಪವನ್ನು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬು ನಾಯುಡು ಅವರು ಉದ್ಘಾಟಿಸಿದರು

ಒಟ್ಟು ಎರಡೂವರೆ ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣವಾದ ಈ ಆಸ್ಥಾನ ಮಂಟಪ ವಿವಿಧೋದ್ದೇಶ ಸಮುದಾಯ ಆಗಿದ್ದು, ಮೊದಲಲ್ಲಿ ಭೂಗರ್ಭಭವನ 1322 ಚ.ಮೀ ಗಳಿದ್ದು, ಭೂತಲದ ಭವನ ಅಷ್ಟೇ ವಿಶಾಲವಾಗಿದ್ದು, ಮೊದಲ ಅಂತಸ್ತಿನಲ್ಲಿ 161 ಚ.ಮೀ ಗಳಿವೆ ಬ್ರಹ್ಮೋತ್ಸವ ಮೊದಲಾದ ಸಂದರ್ಭಗಳಲ್ಲಿ ಹೆಚ್ಚುವ ಯಾತ್ರಿಕರ ಸರತಿಯ ಸಾಲಿನ ಕೋಣೆಗಳಂತೆ ಭೂಗರ್ಭದ ಭವನ ಬಳಕೆಗೆ ಬರುವುದಾದರೆ, ಭೂತಲದ ಭವನವನ್ನು ಕಲ್ಯಾಣೋತ್ಸವ ಊಂಜಲ್‌ಸೇವೆ ಮೊದಲಾದ ಸೇವೆಗಳನ್ನು ನಡೆಸಲು ತಿರುಚಾನೂರಿನ ಆಲಯದಲ್ಲಿ ಅವಕಾಶವಿಲ್ಲವಾಗಿ, ಈ ಉದ್ದೇಶಕ್ಕೆ ಬಳಸಬಹುದಾಗಿದೆ. ಮೇಲಿನ ಅಂತಸ್ತಿನಲ್ಲಿ ಆಸ್ಥಾನ ಆಗಮ ಪಂಡಿತರಿಗೆ ಹಬ್ಬ ಹರಿದಿನ ಉತ್ಸವದ ದಿನಗಳಲ್ಲಿ ಸ್ಥಳಾವಕಾಶವಾಗುವುದು.

## ಇಂಟರ್ ನೆಟ್‌ನಲ್ಲಿ ತಿ. ತಿ. ದೇವಸ್ಥಾನಗಳು

ಪ್ರಪಂಚದ ಯಾವುದೇ ಸ್ಥಳದಿಂದಲೂ ಭಕ್ತರು ತಿರುಪತಿಯ ಬಗ್ಗೆ ತಿಳಿಯಲು ಅನುಕೂಲವಾಗುವಂತೆ ತಿ ತಿ ದೇ. ವೆಬ್‌ಸೈಟನ್ನು, ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬು ನಾಯುಡು ಅವರು ಫೆಬ್ರವರಿ 26 ರಂದು ಆರಂಭಿಸಿದರು ಶ್ರೀನಿವಾಸನ ಬಗ್ಗೆ ವಿವರಗಳನ್ನು ಈ ಮೂಲಕವಾಗಿ ಇಂಟರ್‌ನೆಟ್ ಸೌಲಭ್ಯವಿರುವ ಯಾವುದೇ ಸ್ಥಳದಲ್ಲಿಯೂ ಪಡೆಯಬಹುದಾಗಿದೆ

ಈಗ ಉಂಟಾಗಿರುವ ವೆಬ್ ಸೈಟಿನಲ್ಲಿ ತಿರುಮಲೆಯ ಪುರಾಣ, ಸ್ಥಳ ಇತಿಹಾಸಗಳನ್ನೂ ತಿರುಪತಿ ಸೇರುವ ಮಾರ್ಗ ವಿವರಣೆಯನ್ನೂ ತಿರುಪತಿ ತಿರುಮಲೆಗಳಲ್ಲಿನ ದರ್ಶನಾವಕಾಶ, ಯಾತ್ರಿಕ ಸೌಲಭ್ಯಗಳು, ವಸತಿಗಳ ವಿವರಗಳು ತಿರುಮಲೆ ತಿರುಪತಿಗಳ ಸುತ್ತಮುತ್ತಲ ಪ್ರದೇಶಗಳು ಮುಖ್ಯವಾದ ಆಲಯ ಸಮಯಗಳು, ಸೇವಾ ವಿಶೇಷಗಳು, ಇತರ ತಿ.ತಿ ದೇ ಆಲಯ ವಿವರಗಳು, ವೈದ್ಯಕೀಯ, ಸಾರಿಗೆ, ಸಂರಕ್ಷಣೆಯ ವಿಷಯಗಳು, ಸಾಮಾಜಿಕ, ಶಿಕ್ಷಣ, ಧಾರ್ಮಿಕ ರಂಗಗಳಲ್ಲಿನ ತಿ. ತಿ ದೇವಸ್ಥಾನಗಳ ಚಟುವಟಿಕೆಗಳು, ತಿ ತಿ ದೇ. ಯೋಜನೆಗಳು, ಗ್ರಂಥಗಳು, ಧ್ವನಿಸುರುಳಿಗಳು, ಪುಸ್ತಕ ಭಂಡಾರ, ಶ್ರೀನಿವಾಸ ಕಲ್ಯಾಣ, ಸುಪ್ರಭಾತಗಳ ಚಿತ್ರಗಳು ಮುಂತಾದುವನ್ನು ಕಾಣಬಹುದಾಗಿದೆ ಮೊದಲನೆಯ ಈ ಹಂತದಲ್ಲಿ ಮಾಹಿತಿ ಮತ್ತು ಸ್ಥಿರಚಿತ್ರಗಳು ಮಾತ್ರವೇ ಇದ್ದರೂ ಕಾಲಾನುಕ್ರಮದಲ್ಲಿ ಆಲಯ ಉತ್ಸವಗಳು, ಮತ್ತಿತರ ಚಲನಚಿತ್ರ ವಿವರಗಳನ್ನೂ ಸೇರಿಸಲಾಗುವುದು E ಮೇಲ್‌ನಲ್ಲಿ ಪ್ರತಿಕ್ರಿಯಿಸುವ ಏರ್ಪಾಡುಗಳನ್ನೂ ಮಾಡಲಾಗಿದ್ದು WWW TIRUPATI ORG ಹಾಗೂ WWW TIRUMALA ORG ಗಳ ಮೂಲಕ ಈ ವೆಬ್ ಸೈಟನ್ನು ಸಂದರ್ಶಿಸಬಹುದು.

## ತಿರುಮಲೆಯಲ್ಲಿ ಹೊಸ ಉಪವನ

ತಿ. ತಿ ದೇವಸ್ಥಾನಗಳ ಅರಣ್ಯ ಶಾಖೆಯವರು ಪಾಪವಿನಾಶನಂ ಬಳಿ ಏರ್ಪಾಡು ಮಾಡಿದ ತಿ.ತಿ.ದೇ ಉದ್ಯಾನವನವನ್ನು ಫೆಬ್ರವರಿ 12 ರಂದು ತಿ ತಿ ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ. ಸುಬ್ಬಾರಾವು ಅವರು ಉದ್ಘಾಟಿಸಿದರು

ಪೂಜಾ ಕಾರ್ಯಕ್ರಮಗಳ ನಂತರ ಉದ್ಘಾಟಿತವಾದ ಈ ಉದ್ಯಾನವನ ನಿರ್ಮಾಣದಲ್ಲಿ ಒಂದು ಲಕ್ಷರೂಪಾಯಿಗಳ ವೆಚ್ಚವಾಗಿದೆಯೆಂದು ಅಟವಿ ಶಾಖಾಧಿಕಾರಿಗಳು ತಿಳಿಸಿದರು

ಈ ಕಾರ್ಯಕ್ರಮದಲ್ಲಿ ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಡಿ. ಎಫ್. ಓ. ಶ್ರೀ ಸುಬ್ಬಾರೆಡ್ಡಿ ಮೊದಲಾದವರು ಭಾಗವಹಿಸಿದ್ದರು.

Edited and Published on behalf of T T Devasthanams by Dr N S Rama Murthy, and Printed at T T D Press
by M Lakshmana Rao, B A , L P T , Manager, T T D Press, Tirupati - 517 507



## ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

**ಒಂದು ವಿನಂತಿ;**

ಸಸಿಯೊಂದ ಬೆಳೆವವನು ದೇವರಾ ಸೇವಕನು
ತಲೆಮಾರು ಗಳಿಗೆಲ್ಲ ನೆರಳನವ ಹರಿಸುವನು
ಹರಸುವರು ಜನರವನ, ಅವನೆಂದು ಕಾಣದರು

ತಿರುಮಲೆಯ ಪವಿತ್ರವಾದ ಅರಣ್ಯ ಶ್ರೀ ವೆಂಕಟೇಶ್ವರಸ್ವಾಮಿಯು ಮಾನವ ಜನಾಂಗಕ್ಕೆ ನೀಡಿದ ಅಮೂಲ್ಯ ವರದಾನ. ಈ ಒಂದು ಸೂಕ್ಷ್ಮವೂ ಸುಂದರವೂ ಆದ ಅರಣ್ಯ ಪರಿಸರ ರಕ್ಷಣೆ ಮಾಡಲೆಂದು ತಿರುಮಲೆ - ತಿರುಪತಿ ದೇವಸ್ಥಾನಗಳವರು ಉತ್ತಮವಾದ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯನ್ನು ಆರಂಭಿಸಿದ್ದಾರೆ ಈ ವನಾಭಿವೃದ್ಧಿಯೋಜನೆಯ ಹಲವು ವಿವರಗಳು ಹೀಗೆ ಇವೆ

## ವೃಕ್ಷ ಸಂವರ್ಧನೆ

ಈ ಯೋಜನೆಯನ್ವಯ ಪವಿತ್ರವಾದ ಸಪ್ತಗಿರಿಗಳಲ್ಲಿ ಐದುನೂರು ಗಿಡಗಳನ್ನು ನೆಡಲಾಗುವುದು.

ಪ್ರಯೋಜನಗಳು
* ಗಿಡಗಳ ಈ ತೋಪಿಗೆ ದಾನಿಯು ಅಪೇಕ್ಷಿಸಿದ ಹೆಸರನ್ನಿಡಲಾಗುವುದು
* ಗಿಡಗಳನ್ನು ಐದುವರ್ಷಗಳ ವರೆಗೆ ಆರೈಕೆ ಮಾಡಿ ನೋಡಿಕೊಳ್ಳಲಾಗುವುದು
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು · **ರೂ. 25000.**

## ವೃಕ್ಷ ಪ್ರಸಾದ

ಈ ಯೋಜನೆಯನ್ವಯ ತಿರುಮಲೆಯಲ್ಲಿ ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಗಿಡಗಳನ್ನು ಬೆಳೆಸಲಾಗುವುದು

ಪ್ರಯೋಜನಗಳು
* ಪ್ರತಿವರ್ಷ ದಾನಿಯ ಹೆಸರಿನಲ್ಲಿ ನೂರು ಹೂ ಹಣ್ಣು ಬೆಳೆಯುವ ಗಿಡಗಳನ್ನು ವಿತರಿಸುವುದು.
* ಹತ್ತು ವರ್ಷಗಳವರೆಗೆ ಪ್ರತಿವರ್ಷ ಹಂಚುವಿಕೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ.

ದಾನದ ಮೊಬಲಗು . **ರೂ. 15000.**

## ಸ್ಮಾರಕ ವನಗಳು

ಈ ಯೋಜನೆಯಡಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಸಪ್ತಗಿರಿಗಳಲ್ಲಿ ಯಾವುದಾದರೂ ಒಂದು ಜಾತಿಯ ಹತ್ತು ಗಿಡಗಳನ್ನು ಒಂದು ಕಡೆ ನೆಟ್ಟು ಐದು ವರ್ಷ ಬೆಳೆಸಲಾಗುವುದು.

ಪ್ರಯೋಜನಗಳು
* ತೋಪಿಗೆ ದಾನಿಯ ಹೆಸರನ್ನಿಡಲಾಗುವುದು.
* ಗಿಡಗಳನ್ನು ಐದು ವರ್ಷ ಆರೈಕೆಯಿಂದ ನೋಡಿಕೊಳ್ಳಲಾಗುವುದು
* ಈ ಮೊತ್ತದ ದಾನವು ನೂರು ಶತಾಂಶ ಆದಾಯಕರ ಮುಕ್ತ.

ದಾನದ ಮೊಬಲಗು : **ರೂ. 5000.**

## ವನ ಸಂರಕ್ಷಣ ಭಾಗಸ್ವಾಮ್ಯ

ತಿರುಮಲೆಯ ಅರಣ್ಯಾಚ್ಛಾದನೆಯನ್ನು ರಕ್ಷಿಸಿ ಬೆಳೆಸುವ ಯೋಜನೆಯಿದು

ಪ್ರಯೋಜನಗಳು
* ದಾನಿಯ ಹೆಸರಿನ ಪ್ರಕಟನೆ
* ನೂರು ಶತಾಂಶ ಆದಾಯಕರ ಮುಕ್ತವಾದದ್ದು ಈ ದಾನ

ದಾನದ ಮೊಬಲಗು . **ರೂ. 2000.**

ತಮ್ಮ ದಾನಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ ದೇ. ತಿರುಪತಿ - ಇವರ ಹಸರಿಗ ಡಿ ಡಿ ಯ ರೂಪದಲ್ಲಿ ಕಳುಹಿಸಿ

**ಕಾರ್ಯನಿರ್ವಹಣಾಧಿಕಾರಿ.**

* * * * *

